ಶಾಂತಿ ಸಾಹಿತ್ಯ ಮಾಲೆ

ಪುಷ್ಪ ಮೂರು



# ಅರೆಯಾಳು

( ಎರಡು ನೀಳ್ಗತೆಗಳ ಸಂಗ್ರಹ )



ಕತೆಗಾರರು

ಕುಲಕರ್ಣಿ ಬಿಂದುಮಾಧವ



ಮುನ್ನುಡಿಕಾರರು

ಶ್ರೀ 'ಮಧುರ ಚೆನ್ನ'ರು



ಅಗಸ್ಟ
೧೯೫೦.

ಬೆಲೆ
೧—೮—೦

ಸಂಪಾದಕರು
**ಶ್ರೀ. ಕುಲಕರ್ಣಿ**
**ಬಿಂದು ಮಾಧವ**

ಸಂಚಾಲಕರು
ಹಾಗೂ
ಪ್ರಕಾಶಕರು :
**ಶ್ರೀ. ವ. ನಾ. ಸರದೇಸಾಯಿ**

# ಶಾಂತಿ ಸಾಹಿತ್ಯಮಾಲೆ

ಕೇಂದ್ರ ಕಚೇರಿ
**ಬಾದಾಮಿ**
ವಿಜಾಪೂರ ಜಿಲ್ಹೆ.



ಶಾಖಾ ಕಚೇರಿ
ಗವಳೀ ಗಲ್ಲಿ
**ಹುಬ್ಬಳ್ಳಿ.**

೧೯೫೦
ಅಗಸ್ಟ
ಸಪ್ಟೆಂಬರ
ಅಕ್ಟೋಬರ
ಸಂಚಿಕೆ.



ಮುದ್ರಕರು :
**ವಾಗ್ವಿಲಾಸ ಪ್ರಿಂಟಿಂಗ ಪ್ರೆಸ್**
ಹುಬ್ಬಳ್ಳಿ.

ಮಾರಾಟಗಾರರು :
**ಸಮಾಜ ಪುಸ್ತಕಾಲಯ**
ಧಾರವಾಡ.

# ಅರಿಕೆ



ಪ್ರೀಯ ಓದುಗ,

"ಅರೆಯಾಳು" ನನ್ನ ಎರಡು ನೀಳ್ಗತೆಗಳ ಸಂಗ್ರಹ. "ಸೆರೆಯಾಳು" ನೀಳ್ಗತೆ ಅಂತರಂಗ ಕಾರ್ಯಾಲಯದವರಿಂದ ಈ ಮೊದಲೇ ಪ್ರಕಟತವಾಗಿ ಓದುಗರಿಂದ ಮೆಚ್ಚಿಕೆ ದೊರಕಿಸಿಕೊಂಡ ಕತೆ. "ಅರೆಯಾಳು" ಪ್ರಕಟವಾಗುತ್ತಿರುವದು ಇದೇ ಮೊದಲು ಸಲ.

ಐದು ವರುಷಗಳ ಹಿಂದೆ– 'ಬಾಳಿನಲ್ಲಿ ಸಮತೆಬೇಕು,' ಸ್ವಾತಂತ್ರ್ಯ ಬೇಕು, ಸಹಕಾರಬೇಕು' ಎಂಬ ಒಂದು ತತ್ವ ನನ್ನೆದೆಯಲ್ಲಿ ಮೂಡಿತು. ಈ ತತ್ವವನ್ನು ಕತೆಗಾರಿಕೆಯ ಮೂಲಕ ಪ್ರತಿಪಾದಿಸಲು, ಸ್ವಾಭಾವಿಕವಾದ ವಸ್ತುವನ್ನಾರಿಸಲು ಮೂರು ವರುಷಗಳ ಕಾಲ ನಾನು ನೂರಾರು ಕುಟುಂಬಗಳನ್ನು ಪರೀಕ್ಷಿಸುತ್ತಲೇ ಇದ್ದೆ. ಹಿಂದಿನ ತಲೆ ಮಾರಿನಲ್ಲಿ ಗಂಡನೊ, ಹೆಂಡತಿಯೊ ಮನೆಯ ಯಜಮಾನಿಕೆ ವಹಿಸಿ ಉಳಿದವರ ಸ್ವಾತಂತ್ರ್ಯ ಅಪಹರಿಸುವ ಸ್ಥಿತಿ ಇದ್ದರೆ, ಇಂದಿನ ಯುವ ಜನಾಂಗ ವಿದ್ಯೆಯ ಸಂಸ್ಕಾರ, ಹಿರಿಯರ ತಪ್ಪು ಹೆಜ್ಜೆಗಳಿಂದ ಒಲವಿನ ನ್ಮೃತ ಜೀವನಕ್ಕಾಗಿ ಹಾರೈಸು–ತ್ತಿರುವದನ್ನು ಕಂಡೆ. ಹಳ್ಳಿಗರು ಮಾತ್ರ ಇಂದಿಗೂ ಸಮತೆ, ಸ್ವಾತಂತ್ರ್ಯಗಳನ್ನು ಕಾಯ್ದುಕೊಂಡಿದ್ದಾರೆ. ಆ ನೂರಾರು ಕುಟುಂಬಗಳ, ವ್ಯಕ್ತಿಗಳ ಪ್ರತಿನಿಧಿಗಳಾಗಿ ಇಲ್ಲಿಯ ಪಾತ್ರಗಳು ಪರಿಪಾಕಗೊಳ್ಳಲು ಇನ್ನೊಂದು ವರುಷ ಹಿಡಿಯಿತು.

ತತ್ವಕ್ಕಾಗಿ ಕತೆ "ಸೆರೆಯಾಳ" ನಲ್ಲಿ ಬೆಳೆದು ಬಂದಿದ್ದರೆ ಜೀವನಕ್ಕಾಗಿ ತತ್ವ "ಅರೆಯಾಳ" ನಲ್ಲಿ ಮೂಡಿದೆ. ನನ್ನ ಹಾಗು ನನ್ನ ಸ್ನೇಹಿತರ ಬದುಕುಗಳೆ "ಅರೆಯಾಳಿ" ನಲ್ಲಿ ಪಡಿ ಮೂಡಿವೆ. ಹಳ್ಳಿಯ ಜನ, ಅವರ ಸಾಂಪ್ರದಾಯ ರೀತಿ ನಡವಳಿಕೆಗಳನ್ನು ಪಟ್ಟಣದ ನಾಗರಿಕರು ಹಾಸ್ಯ ಮಾಡುತ್ತಿದ್ದರೆ, ಹಳ್ಳಿಗರು ಅದೇ ರೀತಿಯಾಗಿ ಪಟ್ಟಣದ ನಾಗರಿಕರನ್ನು ವಿಡಂಬಿಸುವದನ್ನು ಹಳ್ಳಿ-ಪಟ್ಟಣಗಳ ಮಧ್ಯದ ಬಾದಾಮಿಯಲ್ಲಿ ನಿಂತು ಕಂಡುಕೊಂಡೆ, ಒಬ್ಬರನ್ನೊಬ್ಬರು ಅರಿತು–ಅರ್ಥಮಾಡಿಕೊಳ್ಳಲು "ಅರೆಯಾಳು" ನೆರವಾದೀತೆಂದು ನಂಬುತ್ತೇನೆ. ನನ್ನ ಸ್ನೇಹಿತರ ಬಾಳೇ ನನಗೆ ತುಂಬ ಸ್ಫೂರ್ತಿಯನ್ನಿತ್ತಿದೆ. ಒಂದೂವರೆ ವರುಷಗಳ ಅವಧಿಯಲ್ಲಿ ನಾನು "ಅರೆಯಾಳ" ನ್ನು ಬರೆದು ಮುಗಿಸಿದ್ದೇನೆ.

ಈ ನೀಳ್ಗತೆಗಳಲ್ಲಿ ಒಳ್ಳೇಯದೇನನ್ನಾದರೂ ಕಂಡರೆ ಅದೆಲ್ಲ ನನ್ನ ಬರವಣಿಗೆಗೆ ಯಾವಾಗಲೂ ಚೈತನ್ಯವನ್ನೀಯುವ ನನ್ನ ಜನತೆಗೆ ನೀವೆಲ್ಲ ಕೃತಜ್ಞತೆ ಅರ್ಪಿಸಿ ಬಿಡಿ. ದೋಷಗಳೇ ಕಂಡರೆ ಅದಕ್ಕೆ ನಾನೇ ಹೊಣೆಗಾರ!

ಕೇಳಿದೊಡನೆಯೆ ಅಂತಃಕರುಣ, ಪ್ರೀತಿ, ವಿಶ್ವಾಸಗಳಿಂದ ನಮ್ಮ ನಾಡಿನ ಹಿರಿಯ ಆಧ್ಯಾತ್ಮ ಕವಿ ಶ್ರೀ '**ಮಧುರಚೆನ್ನ**' ರು ವಿಸ್ತಾರವಾದ ಮುನ್ನುಡಿ ಬರೆದು ಕೊಟ್ಟು ಉಪಕರಿಸಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ. 'ಸೆರೆಯಾಳು' ಬೆಳಕಿಗೆ ತಂದ 'ಅಂತರಂಗ' ಕಾರ್ಯಾಲಯದವರಿಗೂ, ಮುದ್ದಾಗಿ ಅಚ್ಚುಮಾಡಿಕೊಟ್ಟ 'ವಾಗ್ವಿಲಾಸ' ಪಾವರ ಪ್ರಿಂಟಿಂಗ ಪ್ರೆಸ್ಸಿನ ಒಡೆಯರು ಕೆಲಸಗಾರರಿಗೂ ನಾನು ಋಣಿ.

**ಶಾಂತಿ ಸಾಹಿತ್ಯ ಮಾಲೆ**
**ಬಾದಾಮಿ**
ತಾ. ೧೬-೫-೧೯೫೦

**ಕುಲಕರ್ಣಿ ಬಿಂಧುಮಾಧವ**

---

# ಮಾತು-ಕತೆ

'ಅರೆಯಾಳು' ನಮ್ಮ ಮಾಲೆಯ ಮೂರನೆಯ ಕುಸುಮ. ನಮಗೆಲ್ಲ ನೆರವಾದ ಓದುಗರು, ಆಶ್ರಯದಾತರು, ಲೇಖಕರು, ಮುನ್ನುಡಿಕಾರರು ಎಲ್ಲರಿಗೂ ನಾವು ಕೃತಜ್ಞರು.

ಹಾಗೆಯೆ ಮುಖಪುಟ ಅಂದವಾಗುವಂತೆ 'ವಿಕಾಸ'ದ ಸಂಪಾದಕರು ತಮ್ಮ ಪಡಿಯಚ್ಚನ್ನಿತ್ತು ಸಹಕರಿಸಿದ್ದಕ್ಕಾಗಿ ಅವರಿಗೂ, ಶ್ರೀ. ಕುಲಕರ್ಣಿ ಬಿಂದುಮಾಧರ ಪಡಿಯಚ್ಚನ್ನಿತ್ತು ನೆರವಾದ ಜನಮತದ ಸಂಪಾದಕರಿಗೂ, ವಾಗ್ವಿಲಾಸ ಪಾವರ ಪ್ರಿಂಗ್ ಪ್ರೆಸ್ಸಿನ ಒಡೆಯರು ಕೆಲಸಗಾರರಿಗೂ ನಾವು ಕೃತಜ್ಞರು.

—ಸಂಚಾಲಕ.

---

ಓಂ

# ಮುನ್ನುಡಿ



ಶ್ರೀನಿವಾಸರ ಕತೆಗಳು ನಾಡಿನಲ್ಲಿ ಹಬ್ಬಿ ಕೆಲಕಾಲವಾದ ಮೇಲೆ ಆನಂದರ ಕತೆಗಳು ವೈದೋರಿ ವಾಚಕರನ್ನು ಆನಂದ ಸಾಗರದಲ್ಲಿ ಮುಳುಗಿಸಿದಂತೆ, ಉತ್ತರ ಕರ್ನಾಟಕದಲ್ಲಿ ಆನಂದಕಂದರ ಕತೆಗಳು ನಾಡಿಗರನ್ನು ನಲಿಸಿ ಕೆಲವು ವರುಷ ಗತಿಸಿದ ಮೇಲೆ ಇದೀಗ ಶ್ರೀಮಾನ್ **ಕುಲಕರ್ಣಿ ಬಿಂದುಮಾಧವರ** ಕತೆಗಳು ನಮಗಿಂದು ಪುನಃ ಭವ್ಯ ಭವಿಷ್ಯತ್ತನ್ನು ನೆನಪಿಗೆ ತಂದು ಕೊಡುತ್ತವೆ. ಹಳ್ಳಿಯ ಹೃದಯವನ್ನು ಸರಳವಾದ ಶೈಲಿಯಲ್ಲಿ ಚಿತ್ರಿಸುವದು ಇವರೀರ್ವರು ಕತೆಗಾರರ ರೀತಿ.

ಇವರ "ತಾಯಿ" "ಸೆರೆಯಾಳು" ಮೊದಲಾದ ಚಿಕ್ಕ ಕತೆಗಳ ಹೊತ್ತಿಗೆಗಳು ಈಗಾಗಲೆ ಪ್ರಕಟಿತವಾಗಿದ್ದು ಇದೀಗ ಇವರ "ಅರೆಯಾಳು" "ಬರಿಗೋಳು" ಗಳು "ಸೆರೆಯಾಳ" ನ್ನು ಕೂಡಿಕೊಂಡು ಪ್ರಕಟವಾಗುತ್ತಲಿವೆ. ಪೂರ್ವಾರ್ಧದಂತಿರುವ "ಬರಿಗೋಳು" ಉತ್ತರಾರ್ಧದಂತಿರುವ "ಅರೆಯಾಳು" ಗೆ ಪೂರಕವಾಗಿದೆ.

"ಸೆರೆಯಾಳ"ನ ಒಂದೇ ಒಂದು ಪುಟವನ್ನು ಓದಿ ನೋಡಿದರೂ "ಇಷ್ಟು ಸ್ವಾಭಾವಿಕತೆಯು ಕತೆಗಾರರಿಗೆ ಹೇಗೆ ಸಾಧಿಸಿರಬಹುದು?" ಎಂದು ಓದುಗರಿಗೆ ಆಶ್ಚರ್ಯವಾಗದಿರದು!!! ಇದಕ್ಕಿಂತ ಹೆಚ್ಚಿಗೆ ನಾನೇನೂ ಇದರ ಬಗೆಗೆ ಹೇಳಬಯಸುವದಿಲ್ಲ. ಏಕೆಂದರೆ ಅದು ಮೊದಲೊಮ್ಮೆ ಅಚ್ಚಾಗಿ ಓದುಗರ ಅವಗಾಹನೆಗೆ ಬಂದ ಕತೆಯೇ ಇರುತ್ತದೆ. ಈಗ ಪುನಃ ಅದರ ಬಗೆಗೆ ಹೆಚ್ಚಿಗೆ ಹೇಳಬೇಕಾದ ಅವಶ್ಯಕತೆಯಿಲ್ಲ.

ಶ್ರೀ. ಮಾರ್ಟಿನ್ ಎಂಬವರು ಬರೆದ "ಸಂಭಾಷಣೆ" ಯ ಪುಸ್ತಕದಲ್ಲಿ (ಡಾಯಲಾಗ್) ಎರಡು ಪರಸ್ಪರ ವಿರೋಧಿವಿಷಯಗಳನ್ನು ತೆಗೆದುಕೊಂಡು ಎರಡರ ಮಹತ್ವವನ್ನೂ ಪ್ರಾಂಜಲವಾಗಿ ಸಮರ್ಥಿಸಿ ಕೊನೆಗೆ ಎರಡೂ ವಿಷಯಗಳ ಸಮನ್ವಯವನ್ನು ಸಾಧಿಸಿದಂತೆ "ಬರಿಗೋಳ"ನಲ್ಲಿ ಶ್ರೀ **ಕುಲಕರ್ಣಿ**ಯವರು ಹಳ್ಳಿ ಪಟ್ಟಣಗಳ ಹೆಣ್ಣುಮಕ್ಕಳಿಬ್ಬರ ಮನೋಭಾವನೆಗಳನ್ನು ಪ್ರಾಂಜಲವಾಗಿಯೂ, ಮಾರ್ಮಿಕವಾಗಿಯೂ, ಹೃದಯಂಗಮವಾಗಿಯೂ ಚಿತ್ರಿಸಿದ್ದಾರೆ.

ಅದೇ ಮಾತಿನ ಕೊನೆಯ ನಿರ್ಣಯವು "ಅರೆಯಾಳಿ" ನಲ್ಲಿ ಆಗಿದೆ. ಪಟ್ಟಣದ ಗಂಡು–ಹೆಣ್ಣುಗಳಿಗೆ, ಹಳ್ಳಿಯ ಜನಸಮುದಾಯದ ಸಾಮುದಾಯಿಕ ಉತ್ಸಾಹ ಸಂತೋಷಗಳ ಸುಗ್ಗಿಯಲ್ಲಿ ಹೆಣ್ಣು-ಗಂಡೆಂಬ ಭೇದ ಭಾವವೂ ಕೂಡ ಅಳಿದು ಎಲ್ಲರೂ ಒಬ್ಬ ತಂದೆಯ (ದೇವರಾಯನ) ಚಿಕ್ಕ ಮಕ್ಕಳೋ ಎಂಬಂತೆ ಉತ್ಸವಾದಿಗಳಲ್ಲಿ ಭಾಗವಹಿಸುತ್ತಿರುವ ವಿಶ್ವರೂಪ ದರ್ಶನವಾದ ಕೂಡಲೆ, ತಾವು ಸುಸಂಸ್ಕೃತರು ಇವರು ಅಸಂಸ್ಕೃತರು ಎಂಬ ಪೂರ್ವಗ್ರಹವೆಲ್ಲ ಓಡಿ ಹೋಗಿ ಹಳ್ಳಿಗರ ಹೃದಯ ಪರಿಚಯವಾಗುತ್ತದೆ· ಬುದ್ಧಿಗೊಂದು ಬೆಲೆಯಿದ್ದಂತೆ ಹೃದಯಕ್ಕೂ ಒಂದು ಬೆಲೆಯಿದೆಯೆಂಬುದು ಸುಸ್ಪಷ್ಟ. ಪಟ್ಟಣಿಗರು ಬುದ್ಧಿ ಪ್ರಧಾನರು, ಹಳ್ಳಿಗರು ಹೃದಯ ಪ್ರಧಾನರು. ಹಳ್ಳಿಯ ಹೃದಯ ಪ್ರಧಾನತೆ ಒಮ್ಮೊಮ್ಮೆ ಮೂಢತನವಾಗಿ ಪರಿಣಮಿಸ ಬಹುದಾದರೆ, ಪಟ್ಟಣಿಗರ ಬುದ್ಧಿ ಪ್ರಧಾನತೆಯು ಒಮ್ಮೊಮ್ಮೆ ಆಕಾಶ ಕುಸುಮದಂತೆ ಪರಿಣಮಿಸಬಹುದು. ಹಳ್ಳಿಗರ (ನೈಸರ್ಗಿಕತೆ ಇದ್ದಕ್ಕಿದ್ದಂತೆ ಇರುವದು) ಪಟ್ಟಣಿಗರ ಸಂಸ್ಕರಣ (ತಿದ್ದುಪಡಿ) ಇವೆರಡೂ ಹೊಂದುಗೂಡ ಬೇಕೆಂಬುದು ಸ್ಪಷ್ಟ. ಇದಾಗಬೇಕಾದರೆ ಈ "ಅರೆಯಾಳಿ" ನೊಳಗಿನ ಹಿರಿಯಾಳಾದ ರಾಮುವಿನಂತೆ ಕಲಿತವರು ಹಳ್ಳಿ ಸೇರದೆ ಗತ್ಯಂತರವಿಲ್ಲ ಎಂಬುದೇ ಈ ಕತೆಯ ಸಾರ ಮರ್ಮ.

'ಸ್ವಂತದ ತರ್ಕದಿಂದಲೂ, ಸರ್ವಶಾಸ್ತ್ರಗಳ ಪಠನದಿಂದಲೂ ಜಗತ್ತಿನ ಸಮಸ್ಯೆಯ ಪ್ರಶ್ನೆ ಬಗೆಹರಿಯದೆ, ಮಹರ್ಷಿ ಟಾಲ್‌ಸ್ಟಾಯರಿಗೆ ಕೊನೆಗೆ ಹಳ್ಳಿಗರ ದೃಢಶ್ರದ್ಧಾಮಯ ಸ್ವಾಭಾವಿಕ ಸರಳ ಜೀವನದಲ್ಲಿಯೇ ಬೆಳಕು ಕಂಡಿತೆಂಬ ವಿಷಯವನ್ನು ಸರ್ವರೂ ಓದಿಬಲ್ಲರು. "ಜೀವನದ ಸರ್ವ ಸಂಕಟಗಳನ್ನೆಲ್ಲಾ ಅವರು ಯಾವ ಧೃಢಶ್ರದ್ಧೆಯ ಆಧಾರದಿಂದ ಸಹಿಸಿ ಕೊಂಡು ಜೀವನ ಪಥದಲ್ಲಿ ಮುಂದೆ ಸಾಗುತ್ತಾರೋ ಅದೇ ನಿಜವಾದ ತತ್ವ" ಎಂದು ಅವರು ಕಂಡುಕೊಂಡರು. ಹಳ್ಳಿಯ ಒಬ್ಬ ಹೆಣ್ಣುಮಗಳು ತನ್ನ ಗಂಡನ ಸುಖಕ್ಕಾಗಿ ಮೊದಲಿನಿಂದ ಕೊನೆಯವರೆಗೂ ಎಷ್ಟು ಸಹನೆಯಿಂದ ಎಷ್ಟು ಕಷ್ಟ ಸಹಿಷ್ಣುತೆಯಿಂದ, ತನ್ನ ಸುಖದ ಪರಿವೆಯಿಲ್ಲದೆ ದುಡಿಯುತ್ತಾಳೆಂಬುದರ ಭವ್ಯ ಚಿತ್ರವನ್ನೇ ಶ್ರೀಮತಿ ಪರ್ಲಬಕ್ಕರು ತಮ್ಮ ವಿಶ್ವವಿಖ್ಯಾತ ಕಾದಂಬರಿಯಲ್ಲಿ ("ಭೂಮಿತಾಯಿ") ಜಗತ್ತಿನ ಕಣ್ಣೆದಿರಿಗಿಟ್ಟರು.

ಇದೆಲ್ಲ ದೊಡ್ಡವರ ಮಾತಾಯಿತು. ಆದರೆ ದೊಡ್ಡವರೊಳಗಿನ ಮಹಾ ಪ್ರವಾಹವೇ ಇಂದು ಸಣ್ಣಸಣ್ಣವರಲ್ಲಿಯೂ ಕೂಡ ಚಿಕ್ಕ ಚಿಕ್ಕ ಸೆಲೆಗಳ ರೂಪವನ್ನು ತೆಗೆದುಕೊಳ್ಳುತ್ತದೆ. ಶ್ರೀ. ಬಿಂದುಮಾಧವರು ಇಂದು ತಮ್ಮ ಹೃದಯದ ಚಿಕ್ಕ ಕನ್ನಡಿಯಲ್ಲಿ ಹಳ್ಳಿಗರ ಜೀವನದ ಹಿಂಬದಿಗಿರುವ ಭವ್ಯ ವಿಶ್ವರೂಪ ದರ್ಶನವನ್ನು ಈ ಕತೆಯಲ್ಲಿ ಕಂಡಿದ್ದಾರೆ. ಇದನ್ನು ಕಾಣುವ ವರೆಗೆ ಮನುಷ್ಯನು ಪೂರ್ಣನೇ ಅಲ್ಲ ಎಂಬುದನ್ನು ತೋರಿಸಿಕೊಡುವದಕ್ಕಾಗಿ ಅವರು ಈ ಕತೆಗೆ "ಅರೆಯಾಳು" (ಅರ್ಧ ಮನುಷ್ಯ) ಎಂದು ಹೆಸರು ಇಟ್ಟದ್ದಾರೆ.

ಇವರ ಕಥಾ ಶೈಲಿಯೂ ಅಷ್ಟೇ ಚಮತ್ಕೃತಿಯಿಂದ ಕೂಡಿದೆ. ಇದೇ ಕಲಾವಿದನ ನಿಜವಾದ ಶಕ್ತಿ. ಪರಮೇಶ್ವರ ಪರಮೇಶ್ವರಿಯರು ಇವರ ಕೃತಿಗಳನ್ನು ಬೆಳೆಯಿಸಿ ಬೆಳಗಿಸಲಿ.

— ಓಂ ಶ್ರೀ ಓಂ —

ಹಲಸಂಗಿ
ದಿ. ೧೫-೪-೧೯೫೦

ಕನ್ನಡಿಗರ ಕಿರಿಯಾಳು
**ಮಧುರಚೆನ್ನ, ಹಲಸಂಗಿ**

---

## ನಮ್ಮ ಮೊದಲನೆಯ ಪುಷ್ಪ

# ಪೂಜಾ

(ಗದ್ಯ ಗೀತೆಗಳು)

ಬರೆದವರು :– **ಶ್ರೀ. ಸಿಂಪಿಲಿಂಗಣ್ಣನವರು**

## ಪತ್ರಿಕಾಭಿಪ್ರಾಯಗಳು

ಸ್ವಾರ್ಥರಹಿತವಾದಅಂತಃಚಕ್ಷು, ಶಾಂತಿ ಪೂರ್ಣ ಆಧ್ಯಾತ್ಮ ಜೀವನದ ಆದರ್ಶಉದ್ದೇಶ ಇವುಗಳನ್ನುಳ್ಳವರು ಮಾತ್ರ ಆಧ್ಯಾತ್ಮ ಲೋಕದಲ್ಲಿ ವಿಹರಿಸಲುಯೋಗ್ಯರು. ಅಲ್ಲದೆ ಅಂತಹ ಯೋಗ್ಯತೆಯನ್ನು ಪಡೆಯಲು|ಒಳ್ಳೆಯ ಹಾದಿಯನ್ನು ತೋರಿಸಬಲ್ಲವರು ಶ್ರೀ ಸಿಂಪಿ ಲಿಂಗಣ್ಣನವರು ಇಂತಹ ಗುಣಗಳನ್ನು ಹೊಂದಿದ್ದಾರೆ. ಎಂತಲೇ ಅವರ ಹೃದಯದಂದ ಬಂದಿರುವ ಈ ಗದ್ಯ ಗೀತಗಳು ಶಾಂತಿಯುತವಾದ, ಆಧ್ಯಾತ್ಮಿಕ ಜೀವನದ ಸನ್ಮಾರ್ಗವನ್ನು ತೋರುತ್ತವೆ................"

**—ಚಿತ್ರಗುಪ್ತ,** ಬೆಂಗಳೂರು ನಗರ.

ಶ್ರೀ. ಸಿಂಪಿ ಲಿಂಗಣ್ಣನವರು ಬರೆದಿರುವ ಈ ಕೃತಿ ನಿಜವಾಗಿ ಪವಿತ್ರವಾಗಿದೆ. ಶುಭದಾಯಕವಾಗಿದೆ. ಪೂರ್ಣ ಸಾಹಿತ್ಯಸೇವೆಯ ಫಲದಾಮೃತವಾಗಿದೆ...........ಉನ್ನತ ಧ್ಯೇಯದಿಂದ ಮನುಜ ಜೀವಿತದ ಹಲವು ಭಾವನೆಗಳನ್ನು ಈ ಗದ್ಯಗೀತಗಳಲ್ಲಿ ವಿವೇಚಿಸಿದ್ದಾರೆ........ಕೊನೆಯಲ್ಲಿ ಮೊರೆ ಎಂಬುದೊಂದು ಕವಿತೆ, ನಿಜವಾಗಿ ಕವಿವಾಣಿಯಲ್ಲೇ ಬಂದಿದೆ.

**— ಸುಬೋಧ,** ಬೆಂಗಳೂರ.

"................ದಿಕ್ಕೆಡುವದು ಮಾನವನ ಲಕ್ಷಣವಲ್ಲ, ದುಃಖಮಾಲೆಗಳು ಸುಖಕ್ಕೆ ಸೋಪಾನಗಳೆಂದು ತಿಳಿದು ತಲೆಯೆತ್ತಿ ನಿಲ್ಲಬೇಕು. ವಿಶ್ವಾಸ ಇರಬೇಕು ಎಂಬುದನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾರೆ ............ಈ ಸಂಗ್ರಹದಲ್ಲಿಯ ಒಂದೊಂದು ಗೀತವೂ ಅಮರ ಶಾಂತಿಯ ಸಂದೇಶ ಸಾರುವ ಹಿರಿಯ ಆಧ್ಯಾತ್ಮ ಫಲಗಳು. ಪುಟ್ಟ ಗೀತೆಗಳಲ್ಲಿ ದೊಡ್ಡ ತತ್ವ ನಿರೂಪಿಸಿ ಓದುಗರ ಮನ ಸೆಳೆಯುತ್ತಾರೆ. ಗದ್ಯ ಪದ್ಯಗಳೆರಡರಲ್ಲೂ ನುರಿತ ಕೈ ಎನ್ನುವದಕ್ಕೆ "ಪೂಜೆ"ಯೇ ಒಂದು ಹಿರಿಯ ಸಾಕ್ಷಿ............"

**—'ದೇಶಬಂಧು'** ಬೆಂಗಳೂರ.

# ಸೆರೆಯಾಳು

"ಬಾಳಿದು ಕನಸಲ್ಲ,
ಗೋಳಿನ ತಿಳಿಸಲ್ಲ,
ನನ್ನ ಹಿಗ್ಗಿನ ಚೆಲುತೋಟ"

— 'ಶ್ರೀ. ಆನಂದ ಕಂದರು.'

# ಸೆರೆಯಾಳು.

## ೧

ಬೇಸಿಗೆಯ ಕಾಲವಾದ ಮೂಲಕ ನದಿಯ ಪ್ರವಾಹ ನಿಧಾನವಾಗಿತ್ತು. ಮೊಳಕಾಲು ಪೂರ್ಣ ಮುಳುಗದಷ್ಟು ಆಳವಿತ್ತು ಅಷ್ಟೆ. ಆಗತಾನೆ ಉದಯಿಸಿದ ಸೂರ್ಯ ತನ್ನ ಎಳೆಯ ಕಿರಣಗಳನ್ನು ನದಿಯ ಮೇಲೆ ಕುಣಿಸುತ್ತ ಆಟವಾಡುತ್ತಿದ್ದ. ತೀರದ ತಂಪುಗಾಳಿ ನಡುಕ ಹುಟ್ಟಿಸುವ ಹಾಗಿತ್ತು. ಆದರೆ ಅಭ್ಯಾಸಬಲದಿಂದ ಆ ನಡು ಹರೆಯದ ಹೆಂಗಸು ಮುಸುರೆ ಪಾತ್ರೆಗಳನ್ನು ತೊಳೆಯುತ್ತ ದಂಡೆಯ ಮೇಲೆ ಕುಳಿತಿದ್ದಳು. ಅವಳ ಮನವೆಲ್ಲ ತನ್ನ ಕೆಲಸದಲ್ಲಿ ನಿರತವಾಗಿತ್ತು. ಕಿನಾರೆಯ ಮೇಲೆ ಕುಳಿತಿದ್ದ ಅವಳ ಮಗಳು ಹದಿನಾಲ್ಕು ವರುಷದ ಶಾಮಲಾ ತನ್ನ ಬಾಲ್ಯದ ಜೀವನವನ್ನು ನೆನಿಸಿಕೊಂಡಳೇನೊ! ಅಲ್ಲಿಂದ ಎದ್ದು ಹೋಗಿ ತನ್ನೆರಡು ಬೊಗಸೆಗಳಿಂದ ನೀರನ್ನೆತ್ತಿ ಬಾಯಲ್ಲಿ ಹಾಕಿಕೊಂಡು ಪೂರ್ವದಿಸೆಗೆ ಮೊಗಮಾಡಿ ನಿಂತು ಆ ನೀರನ್ನು ಬಾಯಿಂದ ಚಿಮ್ಮುತ್ತಿದ್ದಳು ಮೇಲಕ್ಕೆ. ಅದರಿಂದ ಹೊರಡುವ ಸಪ್ತ ವರ್ಣಗಳನ್ನು ಕಂಡಾಗ ತನ್ನ ಬಾಲ್ಯಜೀವನದ ಸುಖಗಳೆಲ್ಲ ಅವಳ ಕಣ್ಣೆದುರು ಸುಸುಳಿ ಹೋಗಿರಬೇಕು. ಮಗುವಿನ ಹಾಗೆ ಆಟವಾಡುತ್ತಿರುವ ಅವಳ ತುಟಿಗಳಲ್ಲಿ ಅದಕ್ಕಾಗಿಯೆ ನಗೆ ಬಿರಿಯುತ್ತೇನೊ ! ಮತ್ತೆ ಉತ್ಸಾಹಿತಳಾಗಿ ಇನ್ನೊಂದು ಸಲ ಬಾಯಲ್ಲಿ ನೀರು ತುಂಬಿಕೊಂಡು ಮೇಲಕ್ಕೆ ಚಿಮ್ಮಲಾರಂಭಿಸಿದಳು. ಬದನೆಯೆ ಮೊದಲಾದ ಕಾಯಿಪಲ್ಲೆಗಳಿಗೆ ನೀರುಣಿಸುತ್ತಿರುವ ಕಿನಾರೆ ಅಂಚಿಗಿರುವ ತೋಟ-ಹೊಲಗಳ ರೈತರೆಲ್ಲ ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಉತ್ಸಾಹದಿಂದ ಏನೇನೊ ಜಾನಪದ ಗೀತಗಳನ್ನೂ ಹಾಡುತ್ತಿದ್ದರು. ಬೇರೆ ಹಲವು ಜನ ಜಳಕಮಾಡುವದರಲ್ಲಿ ನಿರತರಾಗಿದ್ದರು. ಹಳ್ಳಿಯ ಗರತಿಯರು ಹಲವರು ನೀರು ತುಂಬಿಕೊಂಡು ಹೋಗುತ್ತಿದ್ದರು.

ಅತ್ತ ಗಮನವಿಲ್ಲದಂತೆ ತನ್ನ ಬಾಲ್ಯ ಜೀವನದ ಕಾರ್ಯಕ್ರಮದಲ್ಲಿ ನಿರತಳಾದ ಶಾಮಲೆಯ ಮುಂದೆ ಕೊಂಚ ದೂರದಲ್ಲಿ –

"ಕ್ರ್ಯೋ....ಕ್ರ್ಯೋ – ಕೊರ್ .."

ಎಂದು ಧ್ವನಿಗೈಯ್ಯುತ್ತ ಶ್ವೇತವರ್ಣದ ನೀರುಗೋಳಿಯೊಂದು ಹಾರಿ ಬಂದು ನೀರಿನ ಮೇಲೆ ಕುಳಿತಿತು. ಶಾಮಲೆ ಅದರ ಮೇಲೆ ಒಂದು ಸಲ ಕಣ್ಣಾಡಿಸಿ ಹಾಗೆಯೆ ಮುಂದುವರಿದಳು. ಇನ್ನೇನು ಅದನ್ನು ಹಿಡಿದುಕೊಳ್ಳಬೇಕು. ಆ ವೇಳೆಗೆ ಕೋಳಿ "ಫಡ - ಫಡ್" ಎಂದು ರೆಕ್ಕೆ ಬೀಸುತ್ತ ಹಾರಿ ಹೋಯಿತು. ಅದು ಹಾರಿ ಹೋಗುವದನ್ನೆ ನೋಡುತ್ತ ನಿಂತಿದ್ದಳು ಶಾಮಲೆ.

"ಏ, ಶಾಮಲಿ....ಅಲ್ಲೇನ ಮಾಡತೀಯು ? ಬಾ ಇಲ್ಲಿ. .."

ಪಾತ್ರೆಗಳನ್ನು ಬೆಳಗುತ್ತಿರುವಾಗ ಆಕಸ್ಮಾತ್ತಾಗಿ ಮಗಳನ್ನು ಕಂಡು ಅಚ್ಚರಿಯಿಂದ ಕರೆದಳು ತಾಯಿ. ಶಾಮಲೆಯ ನೆನಪು ಕನಸಾಯಿತು. ಬೇಗಬೇಗನೆ ಅವಳು ತಾಯಿ ಬಳಿಗೆ ಬಂದಳು.

"ಎಲ್ಲಾ ಬಿಟ್ಟು ಅಲ್ಲ್ಯಾಕ ಹೋಗಿದ್ದಿ? ಸಣ್ಣ ಕೂಸಾಗ್ಯಾಕ ಹಂಗs. ಲಗ್ನ ಆದರ ನಾಕ ಮಕ್ಕಳ ತಾಯಿಯಾಗೂ ಬವಸ. ಸಣ್ಣ ಕೂಸಿನ್ಹಂಗ ಅಲ್ಲೆ ಆಡಿಕೋತ ನಿಂತಾಳ. ಇವತ್ತ ನಿನ್ನ ನೋಡಲಿಕ್ಕೆ ಬರತಾರ. ಇನ್ನ ನಾಲ್ಕು ದಿನಕ್ಕ ಮದಿವಿ ಆದೀತು. ಹುಡುಗಾಟ್ಕೆ ವಳಗs ಇದ್ದೀಯಲ್ಲ ಇನ್ನೂ ..."

ತಾಯಿ ಯಾವುದೋ ಕನಸು ಕಾಣುತ್ತಿರುವಂತೆ, ಒಂದೈದು ನಿಮಿಷ ಮೌನವಾದರು. ಶಾಮಲೆ ತಾಯಿಯನ್ನು ಎವೆಯಿಕ್ಕದೆ ನೋಡುತ್ತ ತಲೆ ತಗ್ಗಿಸಿ ನಿಂತಿದ್ದಳು.

"ನೀನು ಬೆಳಗಿದ ಭಾಂಡಿ ಪರಸು. ಅಷ್ಟರಾಗs ನಾ ಇದ್ನ ಒಗದ ಹಾಕತೀನಿ"

ತನ್ನ ಕರ್ತವ್ಯದ ನೆನಪಾದ ಹಾಗೆ ತಾಯಿ ಮಗಳಿಗೆ ಎಚ್ಚರಿಕೆಯನ್ನಿತ್ತು ಒಗೆಯುವದಕ್ಕೆ ನದಿಗೆ ಇಳಿದರು. ಶಾಮಲೆ ಬೆಳಗಿದ ಪಾತ್ರೆಗಳನ್ನೆಲ್ಲ ಎತ್ತಿಕೊಂಡು ಕೊಂಚ ದೂರ ನಡೆದು ಮಳಲ ಮೇಲೆ ಅವುಗಳನ್ನಿಟ್ಟುಕೊಂಡು ಕುಳಿತು ಒಂದೊಂದಾಗಿ ಒರಿಸಲಾರಂಭಿಸಿದಳು. ಅಷ್ಟು ಹೊತ್ತಿಗೆ ಮಾಸ್ತರರ ಪತ್ನಿ ಸೀತಾ ಸೊಂಟದಲ್ಲಿ ಕೊಡವನ್ನಿಟ್ಟುಕೊಂಡು ಅಲ್ಲಿಗೆ ಬಂದಳು. ಶಾಮಲೆಯನ್ನು ಅಚ್ಚರಿಯಿಂದ ನೋಡುತ್ತ ಅವಳು ಶಾಮಲೆಯ ತಾಯಿಯನ್ನು ಕೇಳಿದಳು.

"ಏನ್ರೆವ, ಬೇಗಾಗೂದ್ರಾಗs ನದಿಗೆ ಬಂದೀರಲ್ಲ?"

ಒಗೆಯುವದನ್ನು ನಿಲ್ಲಿಸಿ ಶಾಮಲೆಯ ತಾಯಿ ಕತ್ತೆತ್ತಿ ನೋಡಿ ನಗುತ್ತ ಹೇಳಿದರು.

ನೀರಿಗಾಗಲೆ ಇಳಿದಿದ್ದಳು ಸೀತಾ. ಹಾಗೆಯೆ ದೂರ ಶಾಮಲೆಯನ್ನು ನೋಡಿದಳು. ಪಾಪ! ಅವಳು ತಲೆ ತಗ್ಗಿಸಿ ಕುಳಿತಿದ್ದಳು ನಾಚಿಕೆಯಿಂದ. ಅವಳ ಕೈ ಅವಳಿಗರಿಯದಂತೆ ಮಳಲನ್ನು ಚಿಮ್ಮುತ್ತಿದ್ದವು. ಸೀತಾ ಶಾಮಲೆಯ ತಾಯಿಯವರೆಡೆಗೆ ತಿರುಗಿ ಕೇಳಿದಳು.

"ಯಾರ ಬರತಾರ್ರಿ ಸಾವಿತ್ರಿಬಾಯರs?"

ಸಾವಿತ್ರಿ ಬಾಯಿಯವರು ಒಗೆದು ಮುಗಿಸಿದ ಧೋತರವನ್ನು ಹಿಂಡುತ್ತ ಹೇಳಿದರು.

"ಯಾರೋ ವತನದಾರ ಕುಲಕರ್ಣೇರಂತವ್ರs".

ಆಗಲೂ ಅವರ ಮೊಗದಲ್ಲಿ ಆನಂದದ ನಗೆ ತುಳುಕಾಡುತಿತ್ತು. ಸೊಂಟದಿಂದ ಕೊಡವನ್ನು ನೀರಿಗಿಳಿಸಿದ ಸೀತಾ ಮತ್ತೆ ಕೇಳಿದಳು.

"ಯಾರು? ಏನು?? ನಿಮಗ ಗೊತ್ತs ಇಲ್ಲೇನು?"

ಸೀತಳ ಈ ಪ್ರಶ್ನಮಾಲಿಕೆಗಳಿಂದ ಸಾವಿತ್ರಿಬಾಯಿಯವರ ಮೊಗದ ನಗೆ ಮಾಯವಾಯಿತು. ಮನಸ್ಸಿಲ್ಲದ ಮನಸ್ಸಿನಿಂದ ಅವರು ಉತ್ತರಿಸಿದರು.

"ನಮಗ ಹೆಂಗ ಗೊತ್ತಾಗೂದವಾ. ನಮ್ಮ ಮನೀಯವರು ಎಲ್ಲಾರ ಹಂಗಲ್ಲ. ಏನಾರ ಸ್ವಲ್ಪ ಹೆಚ್ಚಿಗೆ ಕೇಳಿದರ ತೀರಿತು. ನಮ್ಮ ಗತಿ ದೇವರs ಬಲ್ಲ''.

ಅವರು ನಿಡಿದಾದ ನಿಟ್ಟುಸಿರೊಂದನ್ನು ಗಾಳಿಯಲ್ಲಿ ತೇಲಿಬಿಟ್ಟರು. ಮುಂಗೋಪಿಯಾದ ಸೀತಾ ಅದೇ ವೇಳೆಗೆ ಕೊಡವನ್ನು ತುಂಬಿಕೊಂಡು ಹೊರಟು ನಿಂತ ಸಾವಿತ್ರಿಬಾಯಿಯವರ ಬೆನ್ನು ಹತ್ತಿದಳು. ಇಷ್ಟು ಹೊತ್ತಿನ ವರೆಗೂ ಇವರ ಮಾತನ್ನಾಲಿಸುತ್ತ ಮೌನವಾಗಿ ಕುಳಿತ ಶಾಮಲೆ ಬೇಗನೆ ಬೆಳಗಿದ ಪಾತ್ರೆಗಳನ್ನು ಎತ್ತಿಕೊಂಡು ಅವರನ್ನು ಹಿಂಬಾಲಿಸಿದಳು.

'ಹಂಗಾರ ನಿಮಗೆ ಏನೂ ಗೊತ್ತೇ ಇಲ್ಲ|ಕಾಣಸ್ತದ್ವs''.

ಕಿನಾರೆಯನ್ನು ಹತ್ತುತ್ತ ಕೇಳಿದಳು ಸೀತಾ. ಸಾವಿತ್ರಿಬಾಯಿಯವರು ಖಿನ್ನರಾಗಿ ಉಸುರಿದರು.

"ಗಂಡಸರ ಮನಸು ನಮಗ ಹೆಂಗ ಗೊತ್ತಾಗಬೇಕವs?"

"ಮೋಜಾದ ನಿಮ್ಮ ಸಂಸಾರ. ಅಲ್ಲಾ, ಹೆಂಡತಿ ಮುಂದೂ ಏನೂ ಹೇಳೂ ಹಂಗಿಲ್ಲs ?"

ಅವರು ಏನನ್ನೂ ಉತ್ತರಿಸಲಿಲ್ಲ. ಶಾಮಲೆ ತಾಯಿ ನಿಧಾನವಾಗಿ ಹೆಜ್ಜೆ ಹಾಕುತ್ತಿರುವದನ್ನು ಗಮನಿಸುತ್ತ ಆ ಮೂಲಕ ಅವಳ ಮನದ ಹೊಯ್ದಾಟವನ್ನು ಗುರುತಿಸುತ್ತ ಮೌನವಾಗಿ ಸಾಗಿದ್ದಳು. ಸೀತಳ ಮನೆ ಬಂದಿತು.

"ಹೋಗತೀರಾ ಹಂಗಾರ? ಹೋಗಿ ಬರ್ರಿಪ್ಪ...."

ಎನ್ನುತ್ತ ಒಂದು ಚಣಕಾಲ ತಡೆದು ಸೀತಾ ಮತ್ತೆ ತನ್ನ ಮಾತನ್ನು ಮುಂದುವರಿಸಿದಳು.

"ನಿಮ್ಮ ಯಜಮಾನರು ನಿಮ್ಮನ್ನ ಏನಂತ ತಿಳಕೊಂಡಾರೊ ಏನೊ? ಛಾಳ ಮಾಡಿ ನೀವ ಅವರ ಸೆರೆಯಾಳಂತ ... ..."

ಎಂದು ಸೀತಾ ನುಡಿಯುತ್ತಿರುವಾಗಲೆ ಸಾವಿತ್ರಿಬಾಯಿಯವರ ಕಣ್ಣಂಚಿನಿಂದ ಸಳಕ್ಕನೆ ಕಳಚಿದ ಎರಡು ಕಂಬನಿಗಳನ್ನು ಕಂಡು ಮುಂದೆ

ಮಾತನಾಡಲಾರದೆ ತನ್ನ ಮನೆಗೆ ಹೊರಟು ಹೋದನು. ಹಿಂ ನಿಂತಿದ್ದ ಶಾಮಲೆ ಮಾತ್ರ ಎರಡು ಮೂರು ಸಲ —

''ಸೆರೆಯಾಳು !.... ಸೆರೆಯಾಳು....''

ಎಂದು ತನ್ನಲ್ಲಿಯೇ ತಾನು ಹೇಳಿಕೊಂಡಳು. ಅದರಿಂದ ಅವಳ ಮೊಗ ಇನ್ನೂ ಚಿಕ್ಕದಾಯಿತು. ತಾಯಿ–ಮಗಳು ಮಾತನಾಡದೆ ಮನೆಗೆ ನಡೆದರು. ಅಡಿಗೆ ಮನೆ ತಲಪಿದೊಡನೆಯೆ ಶಾಮಲಾ ತನ್ನ ಕೈಯಲ್ಲಿಯ ಪಾತ್ರೆಗಳನ್ನು ದೇವರ ಕಟ್ಟೆಯ ಮೇಲೆ ಕುಕ್ಕರು ಬಡಿದಳು. ಸಾವಿತ್ರಿ ಬಾಯಿಯವರು ತಮ್ಮ ಸೊಂಟದಲ್ಲಿದ್ದ ಕೊಡವನ್ನು ಅದೇ ವೇಳೆಗೆ ಒಂದು ಮೂಲೆಗೆ ಶಬ್ದವಾಗುವ ಹಾಗಿಟ್ಟು ಕೋಲಿಗೆ ಜೋತು ಹಾಕಿದ ಧೋತರವನ್ನು ದೇವರ ಕಟ್ಟೆಯ ಮೇಲೆ ಹಾಸಿದ ಕೃಷ್ಣಾಂಜನದ ಮೇಲೆ ಬಿಸಾಕಿದರು. ಒಂದು ಚಣಕಾಲದಲ್ಲಿ ನಡೆದು ಹೋದ ತಮ್ಮ ಈ ಕೃತ್ಯಕ್ಕಾಗಿ ತಾಯಿ-ಮಗಳು ಒಬ್ಬರನ್ನೊಬ್ಬರು ನೋಡಿಕೊಂಡರು. ನೊಂದವೆಯ ನೋಟ ಅವರ ಕಣ್ಣುಗಳಲ್ಲಿ ಕಾಣಿಸಿಕೊಂಡಿತ್ತು. ಅಷ್ಟರಲ್ಲಿ ರಾಯರು ಅಲ್ಲಿಗೆ ಬಂದರು.

ರಾಯರಿಗೆ ಸುಮಾರು ನಲವತ್ತೈದು- ಐವತ್ತು ವರುಷಗಳಾಗಿರಬಹುದು. ಅವರು ಚಿಕ್ಕವರಾಗಿದ್ದಾಗ ಗರಡಿ ಸಾಧನೆ ಮಾಡಿದ್ದರಂತೆ. ಅದರ ಕುರುಹಾಗಿ ಈಗಲೂ ಅವರ ಮೈ ಹುರಿಕಟ್ಟಾಗಿಯೆ ಇದೆ. ತಲೆತಲಾಂತರಗಳಿಂದ ದಕ್ಕುತ್ತ ಬಂದ ಕರಣಿಕ ವೃತ್ತಿಯ ಅಧಿಕಾರ ದರ್ಪ ಅವರ ಕಣ್ಣಲ್ಲಿ ಕುಣಿಯುತ್ತಿರುವ ಹಾಗಿತ್ತು. ಹಳೆ–ಹೊಸ ವಿಚಾರಗಳ ಹೊಯ್ದಾಟದಲ್ಲಿ ಭಾರತ ಇರುವಾಗ ರಾಯರು ವಿದ್ಯಾರ್ಥಿ ಜೀವನದಲ್ಲಿ ಪಾದಾರ್ಪಣ ಮಾಡಿದ ಮೂಲಕ ಹಳೆಯ ವಿಚಾರದ ಪ್ರತಿನಿಧಿಯಾಗಿ ಉಟ್ಟಿದ್ದ ಸಂಜೆ, ಜನಿವಾರ ನಿಂತಿದ್ದರೆ, ಹೊಸ ವಿಚಾರದ ಅನುಕರಣದ ಪ್ರತೀಕವಾಗಿ ತಲೆಯ ಮೇಲೆ ಕ್ರಾಫಿನ ಪುಟ್ಟದಾಗಿ ಕತ್ತರಿಸಿದ ಕೂದಲುಗಳು.

ಸ್ವಸ್ಥವಾಗಿ ಕೈಯೂರಿ ಕುಳಿತ ಪತ್ನಿ, ಮಗಳನ್ನು ನೋಡುತ್ತ ರಾಯರು ಊಟದ ಮನೆಯಲ್ಲಿ, ಜಳಕದ ಮನೆಯಲ್ಲಿ ಕಣ್ಣಾಡಿಸಿದರು.

"ಇನ್ನೂ ಒಲಿಗೆ ಉರೀನ ಹಾಕಿಲ್ಲ?"

ಅವರ ಧ್ವನಿಯಲ್ಲಿ ಗಡಸುತನವಿತ್ತು.

"ಹೌದು. ಈಗಿನ್ನ ನದಿಯಿಂದ ಬಂದ್ವಿ.... ಸನದ್ಧಂಗಾಗಬೇಕು?"

ರಾಯರನ್ನು ಕಂಡರೆ ಹೆದರಿ ಸಾಯುತಿದ್ದ ಶಾಮಲೆ ಇಂದು ಯಾವ ಧೈರ್ಯದಿಂದಲೋ ಉತ್ತರಿಸಿದಳು. ಅವಳ ಮಾತುಗಳನ್ನು ಕೇಳಿ ರಾಯರು ಕಿಡಿಕಿಡಿಯಾದರು. ತಾವು ಮನೆಯ ಯಜಮಾನರು. ತಮಗೆ ಪ್ರತಿ ಹೇಳುವಡೆ ?

"ಏನಂದ್ಯ? .. ನನಗ ತಿರುಗಿ ಉತ್ತರಾ ಕೊಡತೀಯಾ?.... ನಿನ್ನ ಹಲ್ಲು ಮುರದು ಕೈಯ್ಯಾಗ ಕೊಟ್ಟೇನು ಇನ್ನೊಮ್ಮೆ ಹೀಂಗ ಹೇಳಿದಂದ್ರ ..."

ರಾಯರ ಧ್ವನಿಯಲ್ಲಿ ಅಧಿಕಾರದ ದರ್ಪವಿತ್ತು. ಅದನ್ನು ಗುರುತಿಸಿದ ಸಾವಿತ್ರಿಬಾಯಿಯವರು ಕಿರುಧ್ವನಿಯಲ್ಲಿ ಹೇಳಿದರು.

"ತಪ್ಪಾತು. ಈಗ ಒಲಿಗೆ ಹಾಕತೀನಿ ..."

ಎಂತಹ ದೈನ್ಯತೆಯಿತ್ತು ತಾಯಿಯ ಧ್ವನಿಯಲ್ಲಿ. ಶಾಮಲೆ ಅದೇಕೋ ವಿಚಿತ್ರವಾಗಿ ತಂದೆಯನ್ನು ನೋಡಿದಳು.

"ಲಗೂನ ಹಾಕು...."

ಎಂದು ಅಬ್ಬರಿಸುತ್ತ ರಾಯರು ಶಾಮಲೆಯನ್ನು ದುರುಗುಟ್ಟಿಕೊಂಡು ನೋಡುತ್ತ ಅಲ್ಲಿಂದ ನಡೆದರು. ಬಾಯಿಯವರು ನೀರಿನ ಒಲೆಗೆ ಉರಿ ಹಾಕಲು ನಡೆದರು. ಶಾಮಲೆ ಕೈಯ ಮೇಲೆ ಕಪೋಲ ವಿಟ್ಟುಕೊಂಡು ದೇವರ ಮುಂದೆ ಕುಳಿತೇಯಿದ್ದಳು ಇನ್ನೂ. ಅವಳ ಮೊಗದಲ್ಲಿ ವಿವಿಧ ವರ್ಣಗಳ ತೆರೆ ಸುಳಿದಾಡಲಾರಂಭಿಸಿತ್ತು. ಕಂಬನಿಗಳು ಕಣ್ಣಿನಿಂದ ಕಳಚಿ ಅವಳ ಹಾಲುಗಲ್ಲಗಳ ಮೇಲೆ ಸ್ಥಿರವಾಗಿ ನಿಂತವು. ಅಂತಹದೆ ನಾಲ್ಕು ಕಂಬನಿ ಅವಳ ತಾಯಿಯವರ ಕಣ್ಣಾಲಿಗಳಿಂದ ಕಳಚಿ ಹೊತ್ತುತ್ತಿದ್ದ ಒಲೆಯನ್ನು ನಂದಿಸಿತು. ಮತ್ತೆ ಕಷ್ಟಪಟ್ಟು ಒಲೆಯನ್ನು ಹೊತ್ತಿಸಿ ಅಡಿಗೆ ಮನೆಗೆ ಬಂದರು.

"ಏನ ಮಾಡತೀಯವಾ ? ಶಾಮುಲಾ? ಅಷ್ಟ ಲಗೂನ ಅಡಿಗಿ ಒಲಿಗೆ ಉರಿ ಹಾಕು".

ಮಾತಿಲ್ಲದೆ ತಾಯಿ ಮಾತಿಗೆ ತಲೆ ಅಲುಗಾಡಿಸಿ ಜಳಕದ ಮನೆಗೆ ನಡೆದಳು ಶಾಮಲೆ. ಅಲ್ಲಿ ಒಲೆಯಲ್ಲಿ ಉರಿಯುತ್ತಿರುವ ಎರಡು ಸೌದೆಯ ತುಂಡುಗಳನ್ನೆತ್ತಿಕೊಂಡು ಒಂದು ಒಲೆಗೆ ಹಾಕಿ ಮೇಲೆ ಒಂದೆರಡು ಸೌದೆಯ ತುಂಡುಗಳನ್ನಿಟ್ಟಳು. ಎರಡು ಮೂರು ಸಲ "ಊದಗೊಳವಿ"ಯ ನೆರವಿನಿಂದ ಒಲೆ ಊದಿಯಾದ ಮೇಲೆ ಮೆಲ್ಲನೆ ಹೊತ್ತಲಾರಂಭಿಸಿತು ಅನಂತರ ಅವಳು ಮತ್ತೆ ದೇವರ ಕಟ್ಟೆಯ ಆಶ್ರಯ ಹಿಡಿದಳು. ತಾಯಿ ಉಪಹಾರ ಸಿದ್ಧಪಡಿಸುವದಕ್ಕಾಗಿ ಒಲೆಯ ಮುಂದೆ ಕುಳಿತರು. ಅವರು ಆಗಾಗ ಕೇಳುತ್ತಿರುವ ಸಾಮಾನುಗಳನ್ನೆಲ್ಲ ಶಾಮಲ ನಿರ್ಜೀವ ಯಂತ್ರದಂತೆ ತಂದುಕೊಡುತ್ತಿದ್ದಳು ತುಟಿಬಿಚ್ಚದೆ.

ಅರ್ಧತಾಸು ಹಾಗೆಯೆ ಜಾರಿತು ರಾಯರ ಜಳಕವೂ ಮುಗಿಯಿತು.

"ಶಾಮಲಾ, ನೀನೂ ಮೈ ತೊಳಕೊಳವಽ ಇನ್ನಽ."

ಶಾಮಲಾ ತಾಯಿ ಆಣತಿಯಂತೆ ಮಿಂದೆದ್ದು ಬಂದಳು. ಮಗಳನ್ನು ಮುಂದೆಕೂರಿಸಿಕೊಂಡು ಹರಹಿದ ಕೂದಲುಗಳನ್ನು ಕೊಬ್ಬರಿಯ ಎಣ್ಣೆಯನ್ನು ಹಚ್ಚಿ ಬಾಚಿ, ಸರಿಯಾಗಿ ಜಡೆ ಹೆಣೆದು ಮುಡಿಕಟ್ಟಿ ಒಂದು ಮಲ್ಲಿಗೆಯ ಮಾಲೆಯನ್ನು ಅದರ ಮೇಲೆ ಹಾಕಿ, ಮುಡಿಯನ್ನಲಂಕರಿಸಿದರು ಅವಳ ತಾಯಿ.

"ಹ್ಞೂಂ- ಇನ್ನಮ್ಯಾಲೆ ನಿನ್ನ ತಂದ ರೇಶಿಮಿ ಸೀರಿ ಉಟಗೊಽ",

ಶಾಮಲೆ ಅದಕ್ಕೂ ಆಗಲೆಂದು ತಲೆವಾಗಿ ರೇಶಿಮೆಯ ಸೀರೆ ಉಟ್ಟುಕೊಂಡು ಅದಕ್ಕೆ ಸರಿಹೋಗುವ "ಝುಂಪರ"ನ್ನು ತೊಟ್ಟುಕೊಂಡಳು.

"ಗಂಡನ ದಾಸಿಯಾಗುವದಕ್ಕೆ, ಅವನ ಸೆರೆಯಾಳಾಗಿ ಆಜೀವ ಮಾನವೂ ಕೊಳೆಯುವದಕ್ಕೆ ಹೆಣ್ಣು ಹೀಗೆ ಅಲಂಕರಿಸಿಕೊಳ್ಳಬೇಕೆ?-".

ತನ್ನ ರೂಪವನ್ನು ನೋಡುತ್ತಲೆ ಶಾಮಲೆಯ ಹೃದಯದಲ್ಲಿ ಇಂತಹ ಹಲವು ಪ್ರಶ್ನೆಗಳು ತಲೆ ಎತ್ತಿನಿಂತವು. ಉತ್ತರವನ್ನು ಹುಡುಕುವದಕ್ಕೆ ಆಗಿನ ವಾತಾವರಣ ಸರಿಯಾಗಿರದಿದ್ದರೂ ಮನದ ಹಿಡಿದವಾಣಿಯೊಂದು ನಿರ್ಧಾರದಿಂದ ನುಡಿಯಿತು.

"ಏನಾದರೂ ಗಂಡನ ಸೆರೆಯಾಳಾಗಿ ಹೆಣ್ಣು ಜೀವಿಸಬಾರದು."

ಮೋಹಕ ನಗೆಯೊಂದು ತುಂಬ ತೆಳುವಾಗಿ ಅವಳ ತುಟಿಗಳಲ್ಲಿ ಮಿಂಚಿತು.

"ಘಂ ಘಂ ಘಂ ಘಂ".

ಎತ್ತುಗಳ ಕೊರಳಲ್ಲಿ ಕಟ್ಟಿದ ಗಂಟೆಯ ನಿನಾದ. ಶಾನುಲೆ ಚಿತ್ತ ವಿಟ್ಟು ಆಲಿಸುತ್ತಿದ್ದಳು.

"ಗಡ- ಗಡ- ಗಡ್ - ಗಡ-"

ಎಂದೆಲ್ಲ ಚಕ್ಕಡಿಯ ಗಾಲಿಗಳು ಸದ್ದು ಮಾಡಿ ಅವಳ ಮನಸ್ಸು ಮುಂದಿನ ಬೈಲಿಗೆ ಬಂದು ನಿಂತವು. ಆ ಚಕ್ಕಡಿಯ ಬರವನ್ನೇ ಕಾಯು ತ್ತ ಕುಳಿತ ರಾಯರು ಸುತ್ತಿ ಇಟ್ಟಿದ್ದ ರುಮಾಲವನ್ನು ತಲೆಯಮೇಲಿಟ್ಟು ಕೊಂಡು ಅದರ ಮೇಲೆ ಅಂಗಿ ಹಾಕಿಕೊಳ್ಳಹೋದರು. ಮುಷ್ಕರ ಹಿಡಿದ ಹಾಗೆ ರುಮಾಲ ಕೆಳಗೆ ಕಳಚಿತು. ಹೇಗೊ ಅಂಗಿಯನ್ನು ಹಾಕಿ ಕೊಂಡು ರುಮಾಲವನ್ನು ಮತ್ತೆ ಸುತ್ತಿಕೊಂಡರು ಅವಸರವಸರವಾಗಿ. ಅದರ ಹಲವು ಕುಂಚಗಳು ಅಸ್ತವ್ಯಸ್ತವಾಗಿ ಹೊರಗೆ ಹಾಯ್ದಿದ್ದವು. ಅದಾವದರ ಗಮನವೂ ಇಲ್ಲದಂತೆ ಮಾಸಿದ ಕೋಟನ್ನು ಹಾಕಿಕೊಂಡರು. ಹಾಗೆಯೆ ಪಡಶಾಲೆಯ ಕಟ್ಟೆಯನ್ನಿಳಿದು ಕೆಳಗೆ ನಡೆದರು.

ಬಿಳಿಯ ಹೋರಿಗಳನ್ನು ಹೂಡಿದ, ಸವಾರಿ ಕಟ್ಟಿದ ಎತ್ತಿನ ಬಂಡಿ ಯನ್ನು ಕಂಡೊಡನೆಯೆ ರಾಯರು ಹರುಷ ಪುಲಕಿತರಾದರು. ಬಂಡಿ ಹೊಡೆಯುವ ಒಕ್ಕಲಿಗ ಎತ್ತಿನ ಕೊರಳಿನ ಜತಿಗೆಗಳನ್ನು ಚಿಕ್ಕಿ ಮೆಲ್ಲನೆ 'ನಗ'ವನ್ನು ನೆಲಕ್ಕಿಟ್ಟ. ಕರಣಿಕ ಶಾಮರಾಯರು, ಅವರ ಪತ್ನಿ ಕಮಲವ ಮಗ ಕೃಷ್ಣ ಕೆಲಕ್ಕಿಳಿದರು.

"ಹ-ಹ್ಞ ಬರಬೇಕು. ಮನಿ ನಿಮ್ಮದ್ಞ ಅದ...."

ರಾಯರು ಹಲ್ಲು ಕಿರಿದು ಅಂಗಿಯ ಮೇಲಿನ ಗುಂಡಿಗೆ ಕೈಯ್ಯೊ ಯ್ದರು. ಅದು ಅವರ ಸ್ವಭಾವ. ಆ ಗುಂಡಿಯನ್ನು ತಿರುಗಿಸುತ್ತ ಮಾತನಾಡುವ ಚಟ ಅವರಿಗಿದೆ. ಇಂದು ಮಾತ್ರ ಅಲ್ಲಿಗೆ ಕೈ ಹೋದೊ ಡನೆಯೆ ರಾಯರು ಝಟ್ರನೆ ಇಳಿದು ಹೋದರು. ಆ ಗುಂಡಿಗೆ ಸರಿ

ಯಜಾದ ಕಾಜಿಗೆ ಅವರು ಗುಂಡಿ ಹಾಕದೆ ಎರಡನೆಯ ಕಾಜಿಗೆ ಹಾಕಿದ್ದರು. ಅದನ್ನು ಸರಿಪಡಿಸುವದಕ್ಕಾಗಿ.

'ಬಾ, ಅತ್ಲಾಗ ಎತ್ತುಕಟ್ಟಿ ಬಾ. ಜಗಾ ತೋರಸ್ತೀನಿ...."

ಎಂದು ಒಕ್ಕಲಿಗನಿಗೆ ಹೇಳುತ್ತ ರಾಯರು ಕೊಂಚ ಮುಂದೆ ಹೋಗಿ ಗುಂಡಿ ಸರಿಪಡಿಸಿಕೊಂಡು ಮನದಲ್ಲಿಯೆ ತಮ್ಮ ಅವಸರಕ್ಕೆ ಪುಷ್ಪ ಬಾಣಗಳನ್ನೇರಿಸುತ್ತ ತಿರುಗಿ ಅವರ ಬಳಿಸಾರಿದರು.

'ಬರಬೇಕು, ಬರಬೇಕು. ಮನಿ ತಮ್ಮದs ಅದ ...''

ಶಾಮರಾಯರು ಪತ್ನಿಯೆಡೆಗೆ ತಿರುಗಿದರು.

''ಆಗಲಿ ನಡೀರಿ"

ಆಧ್ಯತೆಯ ನಗೆ ನಕ್ಕು ನುಡಿದರು ಕಮಲವ್ವ. ರಾಯರು ಅವರನ್ನೆಲ್ಲ ಕರೆದುಕೊಂಡು ಪಡಶಾಲೆಗೆ ಬಂದರು. ಅಲ್ಲಿ ಹಾಸಿದ ಗುಡಾರದ ಮೇಲೆ ಕುಳಿತುಕೊಂಡ ಮೇಲೆ ಯೋಗ ಕ್ಷೇಮದ ಮಾತುಕತೆಗಳು ನಡೆದವು. ರಾಯರು ಕೇಳಿದ ಪ್ರತಿಯೊಂದು ಪ್ರಶ್ನೆಗೂ ಶಾಮರಾಯರು ಪತ್ನಿ ಎಡೆಗೆ ದೃಷ್ಟಿ ಹೊರಳಿಸುತ್ತಿದ್ದರು. ಕಮಲವ್ವ ತುಂಬ ಬಿಗುಹಿನಿಂದ ಉತ್ತರಿಸುತ್ತಿದ್ದರು

''ನಿಮ್ಮ ಸೊಸಿನ್ನ ನೋಡತೀರ್‍ಯಾ?''

ರಾಯರು ಲೋಕಾಭಿರಾಮವಾಗಿ ಮಾತನಾಡುತ್ತ ಕೊನೆಗೆ ಕೇಳಿದರು. ಶಾಮರಾಯರು ಈ ಸಲವೂ ತಮ್ಮ ಮಡದಿಯನ್ನು ನೋಡಿದರು.

''ಆಗಬಹುದು."

ಕಮಲವ್ವ ದರ್ಪದಿಂದ ಉತ್ತರಿಸಿದರು.

''ಏ, ಏನ ಮಾಡತೀಯs? ಲಗೂನ ಶಾಮಲನ್ನ ಕರಕೊಂಡ ಬಾ"

ರಾಯರು ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಬಿಟ್ಟಂತೆ ಹೆಂಡತಿಯ ಮೇಲೆ ಮಾತಿನ ಬಾಣಗಳನ್ನೆಸೆದರು. ಸರ್ವಾಲಂಕಾರ ಭೂಷಿತೆಯಾದ ಶಾಮಲೆಯನ್ನು ಮಾಸ್ತರರ ಪತ್ನಿ ಸೀತಾ ಕೈಹಿಡಿದು ಪಡಶಾಲೆಗೆ

ಕರೆದುಕೊಂಡು ನಡೆದಳು. ನಡುಮನೆ-ಪಡಶಾಲೆಗಳ ಹೊಸ್ತಿಲಲ್ಲಿ ಲಜ್ಜೆಯ ಭಾರದಿಂದ ತಲೆ ತಗ್ಗಿಸಿ ನಿಂತಿದ್ದ ಶಾಮಲೆ ಒಂದು ಸಲ ಕತ್ತೆತ್ತಿ ನೋಡಿದಳು.

ಅವರೂ ಅವಳನ್ನೆ ನೋಡುತ್ತಿದ್ದರು ಎಲ್ಲರ ಕಣ್ಣು ತಪ್ಪಿಸಿ. ವಿಶಾಲವಾದ ಫಾಲ, ಆ ಫಾಲದ ಮಧ್ಯದಲ್ಲಿ ಮೆರೆವ 'ಸಾದಿನ' ಕರಿಯ ಚುಕ್ಕೆ, ಎಣ್ಣೆಗೆಂಪಿನ ಮೈವರ್ಣವಾದರೂ ಅಂದವಾದ ಮುಖ, ಆ ಮುಖದಲ್ಲಿ ಪಳಪಳನೆ ಹೊಳೆವ ತಾರೆಗಳಂತೆ ಹೊಳೆಯುತ್ತಿವೆ ಕಂಗಳು. ಎಳೆಯ ಮೀಸೆಗಳು ಇಳಿಯ ನಾಕಾರ ಪಕ್ತಿಯಾಗಿ ನಿಂತತೆ ತೋರಿತು ಶಾಮಲೆಗೆ. ಆ ತುಟಿಗಳಲ್ಲಿ ಒಂದು ಬಗೆಯ ಲಾಸ್ಯ ಕುಣಿದಾಡುತ್ತಿತ್ತು.

"ಹ್ಞಂ—ಅವರೇ" ಎಂದಿತು ಶಾಮಲೆಯ ಮನಸ್ಸು. ಕಣ್ಣರಳಿಸಿ ಅವರೂ ಅವಳನ್ನೆ ನೋಡುತ್ತಿದ್ದರು.

ಸುಂದರವಾದ ಕೋಲು ಮುಖ, ಲಜ್ಜೆಯಾವರಣದಿಂದ ಉಬ್ಬಿನಿಂತ ಹಾಲು ಗಲ್ಲ, ಯಾವುದೊ ಸಂದೇಶವನ್ನು ತೂರುತ್ತಿರುವ ಕಂಗಳ ದಿಟ್ಟಿ, ಬಿಲ್ಲಿನಾಕಾರವಾಗಿ ಬಾಗಿದ ಹುಬ್ಬುಗಳು. ಯಾವುದೊ ಮಾರ್ದವ ಆ ಬಿರಿದಾದ ತುಟಿಗಳಲ್ಲಿ ನೆಲೆನಿಂತಿದೆ.| ಓರಣವಾಗಿ ಹಿಕ್ಕಿ ಮುಡಿಗಟ್ಟಿ ಅದರ ಮೇಲೆ ಮುಡಿದ ಮಲ್ಲಿಗೆಯ ವಾಸನೆ ತನ್ನ ಪರಿಮಳವನ್ನು ಅವರಿಗೆ ಮುಟ್ಟಿಸಿದೆ. ಎಲ್ಲ ಏನೋ ಅಪರಸ್ಸು ಕೈಮಾಡಿ ಕರೆದ ಹಾಗಾಯಿತು.

ಒಂದೆರಡು ನಿಮಿಷಗಳಲ್ಲಿಯೆ ಕಳ್ಳಬೆಕ್ಕಿನಂತೆ ಒಬ್ಬರನ್ನೊಬ್ಬರು ನೋಡಿದರು. ಮೈಯಲ್ಲೆಲ್ಲ ವಿದ್ಯುತ್ ಸಂಚಾರವಾದ ಹಾಗಾಯಿತು. ಅನಿರ್ವಚನೀಯ ಆನಂದ ಅವರ ಹೃದಯಗಳಲ್ಲಿ ನರ್ತಿಸುತ್ತಿತ್ತು. ಹಠಾತ್ತನೆ ಶಾಮಲೆ ಏನೊ ನೆನಪಾದ ಹಾಗೆ ತಂದೆಯವರನ್ನು ನೋಡಿದಳು. ಅವರು ಕ್ರೂರವಾಗಿ ಅವಳನ್ನು ನೋಡುತ್ತಿದ್ದರು. ಅದೇ ವೇಳೆಗೆ ಎಚ್ಚತ್ತ ಕೃಷ್ಣ ತನ್ನ ತಾಯಿಯನ್ನು ನೋಡಿದ. ಕಮಲವ್ವ ಗುರು ಅಪರಾಧಿಯಾದ ಶಿಷ್ಯನನ್ನು ದಂಡಿಸಬೇಕಾದಾಗ ನೋಡುವ ಕಂಗಳ ನೋಟದಿಂದ ಮಗನನ್ನು ನೋಡುತ್ತಿದ್ದಳು. ಆ ನೋಟಗಳಿಂದ ಶಾಮ

ಲೆಯ ಭಾವೀ- "ಅವರ" ಆನಂದ, ಉತ್ಸಾಹ ಒಂದೇ ಚಣದಲ್ಲಿ ಕೆಳ ಗುರುಳಿದವು. ಇಬ್ಬರೂ ಒಂದೇ ಸೇರಿಗೆ ಕತ್ತನ್ನು ಕೆಳಕ್ಕೆ ತಗ್ಗಿಸಿದರು.

"ಬರ್ರಿ ಇನ್ನ,"

ರಾಯರ ಆಜ್ಞೆಯಾಗುವದೆ ತಡ ಸೀತಾ ಶಾಮಲೆಯನ್ನು ಕರೆದು ಕೊಂಡು ಬಂದು ಕಮಲವ್ವ ಕುಳಿತ ಪಕ್ಕಕ್ಕೆ ಅವಳನ್ನು ಕುಳ್ಳಿರಿಸಿ ತಾನೂ ಕುಳಿತಳು.

"ಏನವ ನಿನ್ನ ಹೆಸರು?"

"ಶಾಮಲಾ"

"ಎಲ್ಲೀತನಕ ಓದಿಯುವಾ?"

"ಪಂಡ ಆರೆತ್ತೆ ಮಾಡೀನಿ"

ಶಾಮಲೆ ಕೆಳಗೆ ತಗ್ಗಿಸಿದ ಕತ್ತನ್ನು ಮೇಲಕ್ಕೆತ್ತದೆ ನೆಲವನ್ನೆ ದಿಟ್ಟಿಸಿ ನೋಡುತ್ತ ಹೇಳಿದಳು ನಿಧಾನವಾಗಿ.

"ನನ್ನ ಮಗನನ್ನು ನೋಡು ಬಿ. ಎ. ಕ್ಕೆ ಕೂಡಿಸೀನಿ. ಇರಲಿ. ಓದಲಿಕ್ಕೆ ಬರತದೇನು?"

ಕಮಲವ್ವನವರ ಮಾತಿಗೆ ಬರಿಯ ತಲೆ ಅಲುಗಾಡಿಸಿದಳು ಶಾಮಲೆ. ರಾಯರು ಓಡಿ ಹೋಗಿ ವರ್ತಮಾನ ಪತ್ರವನ್ನು ತಂದು ಅವಳ ಮುಂದಿಟ್ಟರು. ಶಾಮಲೆ ಹೆದರುತ್ತ ಹೆದರುತ್ತ ಓದಿದಳು. ಅನಂತರ ಮತ್ತೆ ಕಮಲವ್ವ ಕೇಳಿದರು.

"ಹಾಡಲಿಕ್ಕೆ ಬರತ್ತದೇನವ್ವ?"

"ಭಾಳ ಚಲೊ ಹಾಡತಾಳ್ರಿ ನಮ್ಮ ಹುಡಿಗಿ. ಹಾಡ, ಶಾಮಲಾ"

ರಾಯರ ಅಧಿಕಾರವಾಣಿ. ಶಾಮಲೆಗೆ ಹಾಡಲು ಬರುವದಿಲ್ಲವೆಂದೇನೂ ಅಲ್ಲ. ಆದರೆ ಶಾಸ್ತ್ರೀಯವಾದ ಅಭ್ಯಾಸವಾಗಲಿ, ಇಂಪಾದ ಕಂಠವಾಗಲಿ ಅವಳಿಗಿರಲಿಲ್ಲ. ಉಭಯ ಸಂಕಟಕ್ಕಿಟ್ಟುಕೊಂಡಿತು ಶಾಮಲೆಗೆ ಹಾಡದೆ ಇದರೆ ತಂದೆ ರೌದ್ರಾವತಾರ ತಾಳುತ್ತಾರೆ. ಹಾಡಿ

ದರೆ ಯಾರಿಗೂ ಅದು ಮೆಚ್ಚಿಕೆಯಾಗಲಾರದು. ಪಕ್ಕದಲ್ಲಿಯೇ ಇದ್ದ ಸೀತಾ ಅವಳನ್ನು ತಿವಿದು

"ಬಂಪ್ಡಂಗ ಹಾಡು."

ಎಂದು ಕಿವಿಯಲ್ಲಿ ಪಿಸುಗುಟ್ಟಿದಳು. ಕಂಠ ಸರಿಪಡಿಸಿಕೊಂಡು ಹಾಡಲಾರಂಭಿಸಿದಳು. ಆವಳ ಹಾಡುಗಾರಿಕೆ ಯಾರನ್ನೂ ಮುಗ್ಧಗೊಳಿಸಲಿಲ್ಲ, ಕಮಲವ್ವನವರೆ

"ಸಾಕ ಬಿಡವ ಇನ್ನ"

ಎಂದು ಹೇಳಬೇಕಾಯಿತು. ಶಾಮಲೆ "ಬದುಕಿದಿಯಾ ಬಡ ಜೀವನವೆ !" ಎಂದುಕೊಂಡು ಮೌನವಾದಳು. ಕಮಲವ್ವ ಮುಂದಾಗಿ ಶಾಮಲೆಯ ಹಣೆಗೆ ಕುಂಕುಮದ ಬೊಟ್ಟಿಟ್ಟು ಗಲ್ಲಗಳಿಗೆ ಅರಸಿಣ ಹಚ್ಚಿ ಬಾಳೆಯ ಹಣ್ಣುಗಳ ಹಣಿಗೆಯೊಂದನ್ನು ಉಡಿತುಂಬಿದರು. ಸೀತಾ ಮತ್ತೆ ಶಾಮಲೆಯನ್ನು ಕರೆದುಕೊಂಡು ಒಳಕ್ಕೆ ನಡೆದು, ತಿರುಗಿ ಸಾವಿತ್ರಿಬಾಯಿಯವರ ಜತೆಗೆ ಫಲಾಹಾರ, ಚಹ ತಂದಿಟ್ಟಳು. ಹೊರಗೆ ಎಲ್ಲರೂ ಫಲಹಾರಗಿಟ್ಟಿಸಿ ಚಹ ಕುಡಿದ ನಂತರ ರಾಯರ ನಿರೂಪ ಪಡೆದು ಮನೆಯಿಂದ ಹೊರ ಬಿದ್ದರು. ಅವರ ಒಕ್ಕಲು ಮಗ ಬಂಡಿಗೆ ಎತ್ತುಗಳನ್ನು ಹೂಡಿ ಅಗಲೆ ಊರ ಕಡೆಗೆ ಮೊಗಮಾಡಿ ನಿಲ್ಲಿಸಿದ್ದ. ಕೃಷ್ಣನನ್ನು ನೋಡುವದಕ್ಕಾಗಿ ರಾಯರ ಹಳ್ಳಿಯ ಹಲವು ಜನ ಅವರ ಭಾವೀ ಅಳಿಯದೇವರನ್ನು ಕಾಣುವದಕ್ಕಾಗಿ ಗುಂಪುಗೂಡಿ ನಿಂತಿದ್ದರು. ಎಲ್ಲರೂ ಚಕ್ಕಡಿ ಹತ್ತಿ ಕುಳಿತ ನಂತರ ಗಾಡಿ ಹೊರಟಿತು. ಊರು ದಾಟುವವರೆಗೂ ಕಳುಹಿಸಿ ಬರಲು ಸಾಂಪ್ರದಾಯದಂತೆ ರಾಯರು ಬಂಡಿಯ ಹಿಂದೆ ನಡೆದಿದ್ದರು.

"ಇನ್ನ ನಿಲ್ರಿ ನೀವು. ನಾಲ್ಕಾರು ದಿನದಾಗ ಏನಂಬೂದ್ನ ತಿಳಿಸತೀವಿ...."

ಚಕ್ಕಡಿಯ ಗಾಲಿ ಗುಣಿಗಲ್ಲ ಮೇಲೇರಿ ಕೆಳಕ್ಕಿಳಿದ ಧಡಕಿಗೆ ಎಚ್ಚತ್ತ ಹಾಗೆ ತಲೆಯನ್ನು ಮುಂದೆ ಮಾಡಿ ಕಮಲವ್ವ ಹೇಳಿದಳು ರಾಯರಿಗೆ.

"ಆಗಲಿರಿ. ನನ್ನ ಮಗಳಲ್ಲ; ನಿಮ್ಮ ಮಗಳು...."

ರಾಯರು ಇನ್ನು ಏನನ್ನೊ ಹೇಳುತ್ತಿದ್ದರು. ಅಷ್ಟರಲ್ಲಿಯೆ ಎತ್ತುಗಳು ಬೆದರಿ ಓಟಕಿತ್ತವು ಅವರು ಕಣ್ಮರೆಯಾಗುವ ವರೆಗೂ ನೋಡುತ್ತ ನಿಂತಿದ್ದು ಮರಳಿ ಮನೆ ಸೇರಿದರು. ಒಂದು ಬಗೆಯ ಆನಂದ ಇಂದು ಅವರ ಮೊಗದಲ್ಲಿ ನಗೆಯ ರೂಪದಲ್ಲಿ ಕಾಣಿಸಿಕೊಂಡಿತು.

ಶಾಮಲೆ ಮಾತ್ರ ತುಂಬ ಮೆತ್ತಗಾಗಿದ್ದಳು. ನಿಜವಾಗಿಯೂ ಇರಬೇಕಾದ ಉತ್ಸಾಹ ಇಂದು ಅವಳಲ್ಲಿರಲಿಲ್ಲ. ನೂರೆಂಟು ವಿಚಾರಗಳ ಹೊಡೆತಕ್ಕೆ ಸಿಲುಕಿ ಅವಳ ಚಿತ್ತ ಚಂಚಲವಾಗಿತ್ತು. ಅವಳ ಚಿತ್ತ ಫಲಕದ ಮೇಲೆ ಹಲವು ಮರೆಯಲಾರದ ಭೀಭತ್ಸ ಚಿತ್ರಗಳು ಮೂಡಿ ಮನವನ್ನು ಕೊರೆಯಲಾರಂಭಿಸಿದ್ದವು ಕೀಟಕನಂತೆ. ಯಂತ್ರದಂತೆ ಊಟ ಮಾಡಿ, ತಾಯಿ ಹೇಳಿದಂತೆ ಕೆಲಸ ಮಾಡಿ ಹಗಲು ಕಳೆದಳು ರಾತ್ರಿಯಾಯಿತು.

ಶಾಮಲೆ ತನ್ನ ಹಾಸಿಗೆಯ ಮೇಲೆ ಒರಗಿದಳು. ವಿಚಾರದ ಹೊಡೆತಕ್ಕೆ ಶಿಲುಕಿದ ಅವಳ ಮನಸ್ಸು ನಿದ್ರೆಯನ್ನು ಮಾಯವಾಗಿಸಿತ್ತು. ಹಾಸಿಗೆಯ ಮೇಲೆ ಉರುಳಾಡಿಯೆ ಉರುಳಾಡಿದಳು.

"ಸೆರೆಯಾಳು !.... ಸೆರೆಯಾಳು !!...."

ಆ ನಾಲ್ಕು ಅಕ್ಕರಗಳು ಪುನಃ ಪುನಃ ಅವಳ ತಲೆಯಲ್ಲಿ ಭೇರಿ ನಾದದಂತೆ ಕೇಳಬರುತ್ತಿದ್ದವು.

"ಈ ಗಂಡಸರ ಕುಲವೆ ಹೀಗೆ. ಹೆಣ್ಣು ಸೆರೆಯಾಳಾಗಬೇಕು ಅವರಿಗೆ; ಆಗ ಮಾತ್ರ ನೆಮ್ಮದಿ. ಅಧಿಕಾರ ದರ್ಪ ಎಲ್ಲ ಹೆಣ್ಣು ಸಹಿಸಿ ಸೆರೆಯಾಳಾಗಿ ಈ ಗಂಡಸರ ಜತೆಗೆ ಜೀವಿಸಿದರೆ ಸರಿ. ಇಲ್ಲವಾದರೆ ಹೆಣ್ಣಿಗೆ ಗಂಡಸು ನಿಜವಾದ ಸೆರೆಯಾಳುವಿನ ಜೀವನ ಕೊಡುತ್ತಾನೆ. "ಅರ್ಧಾಂಗಿ" ಎನ್ನುವದೆಲ್ಲ ಬರಿಯ ಮಾತು. ಗಂಡಿಗೆ ಹೆಣ್ಣು ಅರ್ಧ ಅಂಗಿಯೂ ಅಲ್ಲ; ಗಿರ್ಧ ಅಂಗಿಯೂ ಅಲ್ಲ. ಕೇವಲ ಸೆರೆಯಾಳು. ಅವನು ಹೇಳಿದಂತೆ ಕೇಳಿ, ಮನಸಿಲ್ಲದಿದ್ದರೂ ಅವನಾಜ್ಞೆಯಂತೆ ವರ್ತಿಸಿ ಕೊನೆಗೂ

ಅವನನ್ನು ಸಂತೈಸುವದರಲ್ಲಿ ಅವಳ ಜೀವಮಾನ ಕಳೆದುಹೋಗಬೇಕು. ಅವನು ಹೇಳಿದ್ದನ್ನು ಕೈಯಲ್ಲಿ ಹಿಡಿದುಕೊಂಡು ಅವನಾಜ್ಞೆಯಂತ ಹೆಣ್ಣು ನಡೆಯಲೇಬೇಕು. ಇಲ್ಲದಿದ್ದರೆ ಹೆಣ್ಣಿನ ಬಾಳೇ ಕಣ್ಣೀರ ಕಡಲಾಗುತ್ತದೆ. ಅವಳ ಜೀವನ ಸೆರೆಯಾಳಿಗಿಂತಲೂ ಕಡೆಯಾಗುತ್ತದೆ.

ಶಾಮಲೆ ಇನ್ನೊಂದು ಪಕ್ಕಕ್ಕೆ ಹೊರಳಿದಳು. ಅವಳ ವಿಚಾರ ಧಾರೆ ಹಾಗೆಯೆ ಸಾಗಿತ್ತು. ತಂದೆ ತಾಯಿಗಳ ಸಂಸಾರ ಚಿತ್ರ ಅವಳ ಕಣ್ಣೆದುರು ಕುಣಿಯುತ್ತಿತ್ತು. ಕಾಣದ ಕೈಯೊಂದು ಹೃದಯದಲ್ಲಿ ಆಡುತ್ತಿತ್ತು.

"ತಂದೆ ಈಗ ನಮ್ಮನ್ನೆಲ್ಲ ತನ್ನ ಸೆರೆಯಾಳಾಗಿ ಮಾಡಿಕೊಂಡಿಲ್ಲವೆ ? ಒಂದು ಮಾತನಾಡುವದಕ್ಕೂ ನಮಗೆ ಅಪ್ಪದ ಕೊಡುವ ಹಾಗಿಲ್ಲ. ತನ್ನ ಮನಸ್ಸಿಗೇನು ಹೊಳೆಯುತ್ತದೊ, ತನ್ನ ವಿಚಾರಕ್ಕೆ ಯಾವದು ಎಟಕುತ್ತದೊ ಅದರಂತೆ ನಾವು ನಡೆಯಲೇಬೇಕು; ಮನಸ್ಸಿರಲಿ-- ಇಲ್ಲದಿರಲಿ. ಅವನ ಆಜ್ಞೆಯನ್ನು ಉಲ್ಲಂಘಿಸಕೂಡದು. ಹಾಗೇನಾದರೂ ನಾವು ಮಾಡಿದರೆ ನಮ್ಮ ಸ್ಥಿತಿ ದೇವರೆ ಬಲ್ಲ. ಸಮಾಜ ಅದನ್ನೂ ಸಮ್ಮತಿಸ್ಸುತ್ತದೆ. ಹೆಣ್ಣು ಗಂಡನ್ನು ಬಂಧನದಲ್ಲಿರಿಸಬೇಕೆಂದು ಅದೇ ನಿರ್ಣಯಿಸಿದೆ ಏನೊ ! ಗಂಡಸಿಗೆ ಏನಾದರೂ ಎದುರುತ್ತರವಿತ್ತರೆ ಸಮಾಜ ದೂಷಿಸುವದು ಹೆಣ್ಣನ್ನು; ಗಂಡನ್ನಲ್ಲ. ಸಮಾಜ ದೃಷ್ಟಿಯಲ್ಲಿ ಸಮಾಜವನ್ನು ಕಪಿಮುಷ್ಟಿಯಲ್ಲಿ ಹಿಡಿದು ಕುಣಿಸುವ ಗಂಡಸಿನ ದೃಷ್ಟಿಯಲ್ಲಿ ಹೆಣ್ಣೊಂದು ಪಶು. ಪಶುಗಳನ್ನು ಜೋಪಾನ ಮಾಡುವಂತೆಯೆ ಗಂಡಸು ತನ್ನ ವೈಯಕ್ತಿಕ ಸ್ವಾರ್ಥಕ್ಕಾಗಿ ಹೆಣ್ಣನ್ನು ಪೋಷಿಸುತ್ತಾನೆ. ಅವೆರಡರಲ್ಲಿ ಅವನ ಅದೂರ ದೃಷ್ಟಿಗೆ ಹೆಚ್ಚು ಕಡಿಮೆ ಏನಿಲ್ಲ. ಪಶುವೇ ಹೆಣ್ಣು, ಹೆಣ್ಣೇ ಪಶು ಅವನ ದೃಷ್ಟಿಯಲ್ಲಿ. ಪಶುವನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪುರುಷ ಅದನ್ನು ಥಳಿಸುವಂತೆಯೆ ಹೆಣ್ಣನ್ನೂ ಥಳಿಸುತ್ತಾನೆ.....

"ಓ, ತಾಯಿಯನ್ನು ಅಪ್ಪ ಥಳಿಸದ್ದ ದಿನ ಉಂಟೆ? ಉಂಟಿದ್ದರೆ ಅದು ತಾಯಿಗೆ ಅಮೃತ ದಿನ. ಏನಿಲ್ಲದೆ ಹೋದರೂ ಕೊನೆಗೆ ಅಪ್ಪ

ಸಿಕ್ಕ ಹಾಗೆ ಅಪ್ಪನನ್ನು ಬೈಯ್ಯುವ ದಿನವಂತೂ ಇಲ್ಲವೇ ಇಲ್ಲ. ಯಾವ ನೆಪದಿಂದಲಾದರೂ ದಿನಕ್ಕೆ ಮೂರು ನಾಲ್ಕು ಬಾರಿಯಾದರೂ ತಂದೆ ನನ್ನನ್ನು ತಾಯಿಯನ್ನು ಬೈದರೇ ಅವನಿಗೆ ನೆಮ್ಮದಿ. ಹೊಡೆದ ದಿನವಂತೂ ಅವನಿಗೆ ಗಂಟಲಿನಲ್ಲಿ ನಾಲ್ಕು ತುತ್ತು ಅನ್ನ ಹೆಚ್ಚು ಇಳಿಯುತ್ತಿದೆ ಆ ದಿವಸ............

"ಹ್ಞಂ– ವಾರಕ್ಕೆ ಎರಡು ಮೂರು ಅಂತಹ ದಿವಸಗಳನ್ನು ತಾಯಿ ಕಂಡೇ ಕಾಣುತ್ತಾಳೆ. ಕಾಲು ಕೆದರಿಯಾದರೂ ಜಗಳ ತೆಗೆದು ಅವಳನ್ನು ದಂಡಿಸದಿದ್ದರೆ ಅವನಿಗೆ ಸಮಾಧಾನವೇ ಇರುವದಿಲ್ಲವೇನೊ ! ಅಲ್ಪ- ಸ್ವಲ್ಪ ನೋವಾಗುವ ಹಾಗೆ ಥಳಿಸಿದರೆ ಅದೂ ಒಂದು ಪುಣ್ಯ ತಾಯಿಯದು............

"ಒಂದು ದಿನ ಹೀಗಾಯಿತು. ಅಮ್ಮ ಅಡಿಗೆ ಮಾಡುತ್ತ ಕುಳಿತಿದ್ದಳು. ತಂದೆ ಹೊರಗೆ ನಿಂತುಕೊಂಡು ಕುಡಿಯಲು ನೀರು ಬೇಡಿದರು. ಸೌದೆಯೆಲ್ಲ ಮಳೆಗಾಲವಾದ ಮೂಲಕ ಮಳೆಗೆ ನೆನೆದು ಹೋಗಿ ಒಲೆಗೆ ಬೆಂಕಿ ಮಾಡಬೇಕಾದರೆ ಆಗ ನನ್ನ --ತಾಯಿಯ ಗೋಳು ದೇವರೆ ಬಲ್ಲ. ಅಂ ತ ಹ ಸಮಯದಲ್ಲಿ ಉರಿ ಮಾಡುವುದರಲ್ಲಿ ತಾ ಯಿ ಯ— ನನ್ನ ಮನಸ್ಸು ನಿರತವಾಗಿದ್ದುವು. ನೀರು ಕೊಡುವುದಕ್ಕೆ ಒಂದೈದು ನಿಮಿಷ ತಡವಾಯಿತು. ಅಪ್ಪ ಕೆಂಜಗದ ಹಾಗೆ ಮೊಗ ಮಾಡಿಕೊಂಡು ಅಡಿಗೆ ಮನೆಗೇ ಬಂದರು.

"ನಿಮ್ಮ ಕಿವಿ ಕೇಳಿಸೂದುಲ್ಲೇನು? " "ಎಂದೆಲ್ಲ| ಗುಡುಗುಡಿಸಿದರು.

"ಕೇಳಿಸಿತು, ಆದರ ಒಲೀಗೆ ಉರೀ ಮಾಡುತಿದ್ವಿ...."

"ತಾಯಿ ಬಹಳ ಶಾಂತರಾಗಿ ಇನ್ನೇನೊ ಹೇಳುತ್ತಿದ್ದರು. ಅಷ್ಟರಲ್ಲಿ ಅಪ್ಪ—

"ಏನಂದಿ?"

"ಎಂದು ತನ್ನ ಕಂಗಳಿಂದ ಬೆಂಕಿ ಬಾಣಗಳನ್ನು ತೂರುತ್ತ ತಾಯಿಯ ರಟ್ಟೆ ಕಿತ್ತಿ ಆಚೆಗೆಸೆದ. ಅವ್ವ ನೆಲದ ಮೇಲೆ ಬೋರಲಾಗಿ

ಬಿದ್ದುಕೊಂಡಳು. ಆದರೂ ಅಪ್ಪನಿಗೆ ತೃಪ್ತಿಯಾಗಲಿಲ್ಲ. ಒಂದೆರಡು ಸಲ ಅಮ್ಮನನ್ನು ಒದೆದ. ಅಷ್ಟಾದರೂ ಅವನ ಕೋಪ ಕಡಿಮೆಯಾಗಲಿಲ್ಲ. ಒಲೆಯಲ್ಲಿ ಉರಿಯುತ್ತಲಿರುವ ಸೌದೆಯ ತುಂಡನ್ನೆತ್ತಿಕೊಂಡು ತಾಯಿಯನ್ನು ಥಳಿಸಲಾರಂಭಿಸಿದ.

"ಅಯ್ಯೋ ಗಂಡಸಿನ ರಾಕ್ಷಸೀ ಕೃತ್ಯವೆ !.... ...

ಶಾಮಲೆ ತನ್ನಲ್ಲಿಯೇ ತಾನು ಹೇಳಿಕೊಂಡಳು. ಅವಳ ಹೃದಯ ಹಿಂದಿನದನ್ನು ನೆನೆದು ಸಂಕಟಪಡುತಿತ್ತು. ಗಾಢವಾದ ನಿಟ್ಟುಸಿರುಗಳೆಷ್ಟೋ ಅವಳಿಗರಿಯದ ಹಾಗೆ ಹೃದಯದಿಂದ ಹೊರಹೊಮ್ಮುತ್ತಿದ್ದುವು. ನೆನಪಿನ ರೈಲು, ನಿಂತ ನಿಲ್ದಾಣ ಬಿಟ್ಟು ಮುಂದೆ ಸಾಗಿತು.

ಅವನ ಕೋಪ ಕಡಿಮೆಯಾದೊಡನೆಯೆ ಕೈಯಲ್ಲಿಯ ಕಟ್ಟಿಗೆಯನ್ನು ಆಚೆಗೆಸೆದು ಬಿರಬಿರನೆ ಪಡಶಾಲೆಗೆ ಹೊರಟು ನಡೆದ. ಅವ್ವ ದುಃಖದಿಂದ ಆದರೆ ಎಲ್ಲವನ್ನೂ ನುಂಗಿಕೊಂಡು ಏನೂ ಆಗದವರ ಹಾಗೆಯೇ ಇದ್ದಳು. ಹಳ್ಳಿಯ ಹೆಣ್ಣುಮಕ್ಕಳು ತಾಯಿಯ ಮೈ, ಕಪೋಲ ಅಲ್ಲಲ್ಲಿ ಸುಟ್ಟಿದುದನ್ನು ಕಂಡು, ಕನಿಕರದಿಂದ—

"ಅದೇನಾಗೇತೆವ್ವಾವರಕ.... ಏಟೊಕಂದ ಸುಟ್ಟೇತಲ್ಲ"
ಎಂದು, ಕೇಳಿದರೆ ತಾಯಿ ಎಂತಹ ದೊಡ್ಡ ಸುಳ್ಳು ಹೇಳಿದಳು.

"ಅದೇನೂ ಇಲ್ಲವಾಕ ನನಗ ಯಾವಾಗಾರ ಮಲರೋಗ ಬರತ್ವದ ಇವತ್ತು ಅಡಿಗೆ ಮಾಡೂವಾಗಕ ಬರಬೇಕಕ ಅದರ ಸುಟ್ಟಬರಲಿ. ಬಂತು; ಒಲ್ಯಾಗ ಬಿದ್ದಬಿಟ್ಟೆ."

"ಪತಿಯೆ ದೇವರೆಂದು ನೆರೆನಂಬಿದ ಅಮ್ಮ ಎಷ್ಟು ಸಮಾಧಾನದಿಂದ ತಂದೆಯ ತಪ್ಪನ್ನು ತನ್ನ ಮೇಲೆ ಹಾಕಿಕೊಂಡಳು. ಅವಳು ಸಹನೆಯ ಸ್ವರ್ಣ ಮೂರ್ತಿಯೆಂದು ನನಗೆ ಖಚಿತವಾಗಿತ್ತು. ಆದರೆ ಅಧರ ದುರುಪಯೋಗವನ್ನು ಕಂಡು ಕೆರಳಿದೆ, ತಂದೆಯ ರಾಕ್ಷಸೀ ಕೃತ್ಯವನ್ನು ಹಳ್ಳಿಯ ಹೆಣ್ಣು ಮಕ್ಕಳ ಮುಂದೆಯೆ ಹೇಳಬೇಕೆಂದುಕೊಂಡೆ. ತಾಯಿ ಮಾತ್ರ.

ಹಾಗೆ ಮಾಡಗೊಡದೆ ನನ್ನನ್ನು ನಿರ್ಬಂಧಿಸಿದಳು. ಅವಳ ಪ್ರೇಮಕ್ಕೆ ಕಟ್ಟು ಬಿದ್ದ ನನ್ನ ನುಡಿ ನುಡಿಯದಾಗಿತ್ತು....

"ಹೌದು ಸೀತಾ, ಗಂಡಸರ ಮನಸು ನಮಗ ಹೇಂಗ ಗೊತ್ತಾಗೂದವಾ?...."

ತಾಯಿ ನಿದ್ರಿಸುತ್ತಿರುವಾಗಲೆ ಕನಸಿನಲ್ಲಿ ಕನವರಿಸಿದಳು. ಶಾಮಲೆಯ ದೃಷ್ಟಿ ಅತ್ತ ಹರಿಯಿತು. ತಾಯಿ ಭಾರವಾದ ಹೃದಯದಿಂದ ಸೀತಳ ಪ್ರಶ್ನೆಗೆ ಸಮಾಧಾನದ ಉತ್ತರ ಹೇಳಿದುದನ್ನೆಲ್ಲ ಕನಸಿನಲ್ಲಿ ಮತ್ತೆ ನುಡಿಯುತ್ತಿರುವದನ್ನು ಕೇಳುತ್ತಿರುವಂತೆ ಶಾಮಲೆಯ ಕಣ್ಣಲ್ಲಿ ಎರಡು ತೊಟಕುಗಳು ಬಂದು ನಿಂತವು.

"ನೀ ಪುಣ್ಯವಾನಿದ್ದಿ ಅವ್ವ, ನಿನ್ನ ಯೋಗ್ಯತಾ ನನಗ ಬರೂದುಲ್ಲ! ಆದರ ನಾ ನಿನ್ಹಂಗ ಗಂಡನ ಸೆರೆಯಾಳಾಗುದುಲ್ಲ....."

ಶಾಮಲೆ ತನ್ನಲ್ಲಿಯೇ ತಾನು ಮಾತನಾಡಿಕೊಳ್ಳುವಂತೆ, ಗಟ್ಟಿಯಾಗಿ ನುಡಿದಳು. ತಾಯಿಗೆ ಎಚ್ಚರಿಕೆಯಿರಲಿಲ್ಲ.

"ಅವರ ಕೂಡಾನs ನನ್ನ ಮದಿವಿ ಆದೀತು....ಆಗಲಿ....ಆದರೆ ಗಂಡನಿಗೆ ನಾ ಏನು ಸಲಗಿ ಕೊಡೂದುಲ್ಲ.... ನಿನ್ನ ಗೋಳ ನೋಡಿ ನನಗ ಆ ಬುದ್ಧಿ ಬಂದ್ಯದ...

"ನಾನಂತೂ ಸೆರೆಯಾಳಾಗಿ ಬದಕಲಾರೆ...."

"ಹೆಂಡತಿ ಸೆರೆಯಾಳಾಗಿ ನಾನು ಎಂದಿಗೂ ಬದುಕಲಾರೆ....''

ಕೃಷ್ಣ ಇನ್ನೊಂದು ಮಗ್ಗುಲಾಗಿ ಮಲಗುತ್ತ ನುಡಿದ, ಶಾಮಲೆಯಂತೆಯೆ ಅವನ ಸ್ಥಿತಿಯೂ ಆಗಿತ್ತು. ಕಮಲವ್ವ ಮನೆಯನ್ನೆ ಸೆರೆಯಾಳಾಗಿ ಮಾಡಿ ಕುಣಿಸುತ್ತಿರುವದನ್ನು ಕಂಡು ಕಂಡು ಅವನಾತ್ಮ ತಲ್ಲಣಿಸಿ ಹೋಗಿತ್ತು. ಆ ಮನೆಯಲ್ಲಿ ಅವರ ಅಪ್ಪಣೆಯಿಲ್ಲದೆ ಒಂದು ಕಡ್ಡಿಯೂ ಕದಲುತ್ತಿರಲಿಲ್ಲ. ತನ್ನ ತಾಯ ಭಾವನೆಗಳನ್ನು, ಅವರು ಅಧಿಕಾರ ಚಲಾಯಿಸುತ್ತಿರುವದನ್ನು ಕಂಡು ನರಳಿದ. ಅವನ ಮನಸ್ಸು ಹೆಣ್ಣಿನ ಜೀವನವೆ ಹಾಗೆ ಎನ್ನುವ ಸ್ಥಿತಿಗೆ ಬಂದಿತ್ತು.

''ಅಬ್ಬ.... ಪತಿಯೆಂದರೆ ಮಕ್ಕಳೆಂದರೆ ಅಮ್ಮನಿಗೆ ಯಾವ ಬೆಲೆಯೂ ಇಲ್ಲವಲ್ಲ ? ಎಲ್ಲರನ್ನೂ ಸೆರೆಯಾಳುವಿನಂತೆಯೆ ನಡೆಯಿಸಿ ಕೊಳ್ಳುವಳೆ ?....''

ಇಂತಹ ಹಲವಾರು ಸಮಸ್ಯೆಗಳು ಏಕಕಾಲಕ್ಕೆ ಅವನ ಹೃದಯ ದಲ್ಲಿ ತಲೆಯೆತ್ತಿ ನಿಂತು ಮಸಪಾಟಮಾಡಿವೆ. ತಾಯಿ ನುಡಿದ ಮಾತನ್ನು ಒಂದೆರಡು ಸಲ ಅಲ್ಲಗಳೆದದ್ದಕ್ಕೆ ಅವಳು ಛಲ ಹಿಡಿದು ತಂದೆಯನ್ನು ''ಹೆಣ್ಣುಗಾಯಿ'' ''ನೀರುಗಾಯಿ'' ಮಾಡಿದುದುನ್ನು ಅವನು ಕಂಡಿ ದ್ದಾನೆ. ಆ ಭಯದಿಂದ ತಂದೆ ನಡುಗುತ್ತ ರಣಚಂಡಿಯನ್ನು ಕಂಡಂತೆ ತಾಯಿಗೆ ಹೆದರಿ ಸಾಯುತ್ತಿರುವದನ್ನು ನೋಡಿ ಕೃಷ್ಣನ ಪುರುಷಃಎದೆ ''ಮದುವೆಯಾದ ಮೇಲಾದರೂ ಗಂಡಸಾಗಿ ಬಾಳಬೇಕೆ''ಂದು ಹಾರೈಸಿಯುತ್ತಿದೆ.

''ಬಹುಶಃ ಅವಳ ಜತೆಗೆ ನನ್ನ ಮದುವೆಯಾಗುವದು ನಿಶ್ಚಯ. ಆದ ಮೇಲೆ ನಾನು ಖಂಡಿತ ಅವಳ ಸೆರೆಯಾಳಾಗಲಾರೆ. ಮೊದಲು ಅವ ಳನ್ನು ಹತೋಟಿಯಲ್ಲಿಟ್ಟುಕೊಳ್ಳಲೆತ್ನಿಸಬೇಕು. ಕೊಂಚ ಸಲಿಗೆಯನ್ನಿ ತ್ತರೆ ಈ ಹೆಣ್ಣು ಜಾತಿಯೆ ಹೀಗೆ. ನಮ್ಮನ್ನೆ ಆಕ್ರಮಿಸಿ ನಿಂತು ಮೆಟ್ಟಿ ತುಳಿಯುತ್ತದೆ....

''ನಾನಿದಕ್ಕೆಂದಿಗೂ ಆಸ್ಪದ ಕೊಡಲಾರೆ. ಹೆಣ್ಣಿಗೆ ಎಷ್ಟು ಅಧಿ ಕಾರವೂ ಅಷ್ಟೆ. ಅಡಿಗೆ ಮನೆ ದಾಟಿ ಬರುವ ಅಧಿಕಾರ ಸಿಕ್ಕರೂ ನಾಳೆ ಮನೆಯನ್ನು ದಾಟಿಹೋಗುವ ಅಧಿಕಾರ ಪಡೆಯುತ್ತಾಳೆ. ತಂದೆಯಂತೆ ನಾನು ಮಾತ್ರ ಸೆರೆಯಾಳಾಗಲಾರೆ. ಆ ಬಾಳು ನನಗೆ ಹಿಡಿಸದು—''

ನಿರ್ಧಾರದ ನುಡಿಯೊಂದು ಅವನಿಂದ ಹೊರಹೊಮ್ಮಿತು. ಮನ ಸ್ಸಿಗೆ ಒಂದು ಬಗೆಯ ನೆಮ್ಮದಿ ಉಂಟಾಯಿತು. ಮನಕ್ಕೆ ಶಾಂತಿ ಕೊಂಚ ದೊರೆತು ಬೀಸುತ್ತಿದ್ದ ತಂಪುಗಾಳಿಗೆ ನಿದ್ರೆ ಆವರಿಸಿತು.

ನಿದ್ರೆಯಲ್ಲಿಯೂ ಅದೇ ಕನಸು !

ಶಾಮಲೆಯನ್ನು ಸೆರೆಯಾಳಾಗಿ ಮಾಡಿ ಬಾಳ ನೌಕೆಯನ್ನು ಹಗುರಾಗಿ ತೇಲಿಸುವ ಚಿತ್ರ ಅವನ ಕನಸಿನ ಸಾಮ್ರಾಜ್ಯದಲ್ಲಿ ಗೂಡು ಹೂಡೆಯುತ್ತಿತ್ತು. ಮನಸ್ಸು ಅದಕ್ಕೆ ಮಾದರಿಯನ್ನಿತ್ತಿತ್ತು.

೨

ಕೃಷ್ಣ ಶಾಮಲೆಯರ ಮದುವೆ ನಿಶ್ಚಯವಾಗಿ ಹೋಯಿತು. ಕಮಲವ್ವ ತಮ್ಮ ಬಿ. ಎ. ಪಾಸು ಮಾಡಿ ಕೈತುಂಬ ಹಣ ತರುವ ಮಗನಿಗೆ ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದ ಶಾಮಲೆಯನ್ನು ತರಲು ಹಿಂದೆ ಮುಂದೆ ನೋಡಿದರೂ, ಒಬ್ಬಳೇ ಮಗಳಾದ ಶಾಮಲೆಯಿಂದ ಅವಳ ತಂದೆಯ ಆಸ್ತಿ ಕೈಸೇರಬಹುದೆಂಬ ಆಸೆಯಿಂದ ಒಪ್ಪಿದರು. ವರದಕ್ಷಿಣೆಯ ವಿಚಾರವಾಗಿ ಕೊಂಚ ಗಡಿಬಿಡಿಯಾದರೂ ಪುರೋಹಿತರ ಮಧ್ಯಸ್ಥಿಕೆಯಲ್ಲಿ ಮುಕ್ತಾಯವಾಯಿತು.

ಅಂತಹ ಶ್ರೀಮಂತಿಕೆಯ ಠೀವಿ ಏನೂ ಮದುವೆಯಲ್ಲಿರಲಿಲ್ಲವಾದರೂ ಮೋಜು—ಮಜಲಿನ ಅಬ್ಬರ ಇಲ್ಲದ ಶ್ರೀಮಂತಿಕೆಯನ್ನು ತಂದಿತ್ತಿತು. ಏನಾದರೂ ತಿರುವಿಗೆ ಬಂದ ಛಿಕಾರಿಗಳು, ಪರಿಜನರು ಮಾತ್ರ ಸರಿಯಾದ ತಿರುವೆ ಸಿಕ್ಕದ ಮೂಲಕ ದೂರಿದ್ದೂ ಉಂಟು.

ಧಾರೆಮಂಟಪಕ್ಕೆ ಬರುವಾಗ ಶಾಮಲೆಯನ್ನು ಅವಳ ತಾಯಿ ಎಚ್ಚರಿಸಿದರು.

"ಶಾಮಲಿ, ನೀನೂ ನಿನ್ನ ಗಂಡನ ತಲೀಮ್ಯಾಲ ಮುದಲ ಅಕ್ಕೀಕಾಳು ಹಾಕಬೇಕು. ಅಂದರ ನಿನ್ನ ಗಂಡ ನೀ ಹೇಳಿದ್ಹಂಗ ಕೇಳತಾನ."

ಸಾವಿತ್ರಿಬಾಯಿಯವರ ಹೃದಯದ ಹಾರೈಕೆ ಅದು. ನೊಂದ ಜೀವ ಅಲ್ಲವೆ ಅದು? ತಾವು ಪಟ್ಟ ಕಷ್ಟ-ದುಃಖ ಒಂದೂ ತನ್ನ ಕರುಳಿನ ಕಂದನಿಗೆ ತಗಲಬಾರದೆಂದು ಅವರ ಆಸೆ. ಅಂತಹುದೆ ಎಚ್ಚರವನ್ನು ಕಾಮುದಾಯರು ಕೃಷ್ಣನಿಗೆ ಕೊಟ್ಟರು.

"ಕೃಷ್ಣಾ, ಹೇಣ್ತಿ ಮುಖಾ ನೋಡೂ ಮಂತ್ರೋಪದಾಗ ಅಕ್ಕಿಕಾಳು ಹಿಂದಾಗಡಿಗೆ ಹಾಕೀಮುತ್ತೀ ಕಡಿತನಕಾನೂ ಹೆಂಡತಿ ಕುಣಿಸಿದ್ಹಂಗಿ ಕುಣೀಬೇಕಾದೀತಪಾ.........."

ತಮ್ಮ ಅನುಭವದ ವೇದನೆಯಿಂದ ಅವರು ಹೀಗೆ ನುಡಿದರು. ಕಮಲಮ್ಮನವರೆ ಅವರ ಲಗ್ನದಲ್ಲಿ ಮೊದಲು ಅಕ್ಕಿಕಾಳು ಹಾಕಿದವರಂತೆ ! ಆದರಿಂದಲೆ ತಾವು ಹೆಂಡತಿ ಹೇಳಿದಂತೆ ಕೇಳಬೇಕಾಯಿತಂತೆ !!

ಅಕ್ಕಿಕಾಳು ಬೀಳುವಾಗ ತಲೆತಗ್ಗಿಸಿ ಕುಳಿತ ಶಾಮಲೆಗೆ, ತಲೆಎತ್ತಿ ಅಂತಃಪಟವನ್ನೆ ನೋಡುತ್ತ ಕುಳಿತ ಕೃಷ್ಣನಿಗೆ ಸ್ಪರ್ಧೆ ನಡೆದಿತ್ತು. "ಯಾವಾಗ ಅಡ್ಡಗೋಡೆಯು ಹಾಗೆ ಅಡ್ಡಲಾಗಿ ನಿಂತ ತೆರೆ ಕಳಚಿತೊ ! ಯಾವಾಗ ಅಕ್ಕಿಕಾಳು ಹಾಕುವೆವೊ" ಎಂದು ಮನದಲ್ಲಿ ಎಣಿಕೆ ಹಾಕುತ್ತಿದ್ದರು. ಭಟ್ಟರ ವಟಗುಟ್ಟುತ್ತಿರುವ ಮಂತ್ರದ ನಾಗಾಲೋಟವೂ ನಿಧಾನವಾಗಿ ಕಾಣುತ್ತಿತ್ತು ಅವರಿಗೆ. ನಿಮಿಷ-ನಿಮಿಷಗಳು ಜಾರುವಾಗಲೂ ಎದೆ ಒಂದೇ ಸಮನೆ ಹೊಡೆದುಕೊಳ್ಳುತ್ತಿತ್ತು, ಕಣ್ಣು ಕಳಚದೆ ನಿಂತ ಅಂತಃಪಟವನ್ನು ದಿಟ್ಟಿಸುತ್ತಿದ್ದವು.

ಕೊನೆಗೆ ಕಳಚಿತು ಪಟ. ಆ ಚಣವೆ ಒಂದೇ ಕಾಲಕ್ಕೆ ಇಬ್ಬರೂ ಅಕ್ಕಿಕಾಳನ್ನು ಹಾಕಿದರು. ಇಬ್ಬರ ಮೊಗಗಳ ಮೇಲೆಯೂ ಸಂತೋಷ ಕುಡಿವರೆಯಿತು. ಗೆದ್ದೆನೆಂಬ ಬಿಂಕದ ನಗೆ ತುಟಿಗಳಲ್ಲಿ ಹೋಯಿತು.

ಮದುವೆಯೆಲ್ಲ ಸೊಂಪಾಗಿ ನಡೆದು ಹೋಯಿತು.

ಮದುವೆಯಾದರೂ ಮನೆತುಂಬಿಸಲಿಲ್ಲವಾದ್ದರಿಂದ ಶಾಮಲೆ ಇನ್ನೂ ತಂದೆಯ ಮನೆಯಲ್ಲಿಯೇ ಉಳಿದಿದ್ದಳು ಕಲಿಯುವದಕ್ಕಾಗಿ ಕೃಷ್ಣ ನಗರಕ್ಕೆ ಹೊರಟು ಹೋಗಿದ್ದ. ಮೂರು ತಿಂಗಳಕಾಲ ಹೀಗೆಯೆ ಮೊದಲಿನಂತೆ ಜಾರಿ ಹೋಯಿತು.

ಒಂದು ದಿನ ರಾಮರಾಯರ ಒಕ್ಕಲು ಆಳು ರಾಯರ ಕೈಯಲ್ಲಿ ಒಂದು ಚೀಟಿ ತಂದುಕೊಟ್ಟ. ಅದನ್ನು ನೋಡಿದೊಡನೆಯೆ ಸಮಾಚಾರವನ್ನು ತಿಳಿದುಕೊಳ್ಳಲು ಸಾವಿತ್ರಿಬಾಯಿಯವರು ಪಡಶಾಲೆಗೆ ಆತುರದಿಂದ ಬಂದರು. ಶಾಮಲೆಗೂ ಆಸೆಯಾಗದಿದ್ದೀತೆ? ಅವರ ಯೋಗ ಕ್ಷೇಮವನ್ನು ತಾಯಿ ತಂದೆಗಳ ಸಂಭಾಷಣೆಯಿಂದ ತಿಳಿದುಕೊಳ್ಳಲು ಕುತೂಹಲಗೊಂಡು ಅಮ್ಮನನ್ನು ಹಿಂಬಾಲಿಸಿ ಅವಳೂ ಬಂದಳು.

"ಏನ ಬಂದದ ಪತ್ರ?"

ಹೆದರಿಕೆ ಕುತೂಹಲ ಮಿಶ್ರಿತ ಸ್ವರದಲ್ಲಿ ಸಾವಿತ್ರಿಬಾಯಿ ಕೇಳಿದರು. ಓದುವದರಲ್ಲಿಯೆ ತತ್ಪರರಾಗಿದ್ದ ರಾಯರು ತುಟಿ ಎರಡು ಮಾಡಲಿಲ್ಲ.

“ಅಪ್ಪಾ, ಏನದ ಪತ್ರದಾಗs?”

ಶಾಮಲೆ ತುಂಬ ಆತುರದಿಂದ ಕೇಳಿದಳು.

“ನಿನ್ನ ಮಾನವ ಕಾಗದ ಬಂದsದವಾ! ನಿನ್ನ ಗಂಡ ಬಿ. ಎ. ಪಾಸಾದನಂತ. ಓದೂ ತನಕಾನೂ ಪುರಸೊತ್ತಿಗಿ ಎಲ್ಲಿರತsದ ನಿಮಗ ಹೆಣ್ಣು ಮಕ್ಕಳಿಗೆ .......”

ಇಂತಹ ಸಂತೋಷದ ಸಮಯದಲ್ಲಿಯೂ ರಾಯರಿಗೆ ತಾಳ್ಮೆಯಿಲ್ಲ. ಕೃಷ್ಣ ಬಿ. ಎ. ಗೆ ಕುಳಿತ ಸಮಾಚಾರವೇನೋ ಆ ತಾಯಿ— ಮಗಳಿಗೆ ಗೊತ್ತು. ಇಂದು ಬರುವ ಫಲಿತಾಂಶವನ್ನು ಅರಿಯಲು ಅವರಿಗೆ ಆತುರ ಇರದೆ ಇದ್ದೀತೆ? –ರಾಯರಿಗೆ ಮಾತ್ರ ಅದು ಸಮ್ಮತವಿಲ್ಲ. ಯಾವ ಸಂತೋಷದ ಸಮಾಚಾರವಿದ್ದರೇನು? ದುಃಖದ ವಿಷಯ ಇದ್ದರೇನು? ಹೆಣ್ಣು ಅದನ್ನು ಕೇಳಲು ಇಷ್ಟು ಆತುರಪಡುವದೇ?

ಅವರ ದೃಷ್ಟಿಯಲ್ಲಿ ಹೆಣ್ಣೂ ಸೆರೆಯಾಳಲ್ಲವೇನು?

ಇಂತಹ ಸಮಯದಲ್ಲಿಯೂ ಹೀಗೆ ವ್ಯಂಗೋಕ್ತಿಗಳನ್ನಾಡಿದ ತಂದೆಯ ಮೇಲೆ ಎಲ್ಲೆಮೀರಿದ ಕೋಪ ಬಂದಿತಾದರೂ ಶಾಮಲೆ ತಡೆದುಕೊಂಡಳು. ತಂದೆಯ ಈ ಕಟು ಉಕ್ತಿಗೆ ಉತ್ತರ ಕೊಡಬೇಕೆಂದಿದ್ದಳು. ಆದರೆ ತಾನಿನ್ನು ತಂದೆಯ ಆಶ್ರಯದಲ್ಲಿ ಇರುವದಾದರೂ ಎಷ್ಟು ದಿವಸ? ಎಂದು ಕೊಂಡು ಸುಮ್ಮನಾಗಿರಬೇಕು. ಹೇಗೋ ಇರಲಿ. ತಂದೆಯ ನುಡಿಯಿಂದ ಕೊಂಚ ಕೋಪಲುಂಟಾಗಿದ್ದರೂ ತಾಯಿಯನ್ನು ಕಂಡಾಗ ಅದು ಇಳಿದು ಹೋಯಿತು. ಸಾವಿತ್ರಿಬಾಯಿಯವರನ್ನು ಕರೆದುಕೊಂಡು ಶಾಮಲೆ ಅಡಿಗೆ ಮನೆಗೆ ನಡೆದಳು. ಗೊತ್ತು ಅವಳಿಗೆ—“ಅಪ್ಪನ ಇಂತಹ ಬಿರು ನುಡಿಗಳಿಂದ ತಾಯಿಯ ಮನಸ್ಸು ನೋಯುತ್ತಿದೆ.” ಎಂದು. ಒಳಗೆ ಹೋದೊಡನೆಯೆ ತಾಯಿ ಹೇಳಿದರು.

“ಅವರ ಮಾತಿಗೆ ನೀ ಏನೂ ಮನಸಿಗೆ ಹಚಗೋಬ್ಯಾಡವ್ವ. ನಿನ್ನ ಕಾಲಗುಣ ಚಲೋ ಅದs ಅಂತs ನಿನ್ನಗಂಡ ಪಾಸಾದ. ದೇವರಿಗೆ ಒಂದು ತುಪ್ಪದ್ದೀಪ ಹಚ್ಚಿಡು.......”

ಎಷ್ಟು ಹೃದಯ ತುಂಬಿದ ನುಡಿ!

"ಎಲ್ಲಾ ನಿನ್ನಾಶೀರ್ವಾದ ಅವ್ವಾ..."

ಎಂದು ಶ್ಯಾಮಲೆ ಕತ್ತೆತ್ತಿ ನೋಡಿದಳು. ತಾಯಿಯ ಕಣ್ಣಲ್ಲಿ ನೀರೂರಿತ್ತು. ಹೆಣ್ಣಿನ ಕಣ್ಣೀರಿಗೆ ಕಾರಣನಾದ ಗಂಡಸನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಅವಳಂತರಾತ್ಮ ನೊರೆಯಿಡುತ್ತಿತ್ತು.

ಸಾವಿತ್ರಿ ಬಾಯಿಯವರು ದೇವರ ಮುಂದೆ ನೀಲಾಂಜನದ ದೀಪವನ್ನು ಹೊತ್ತಿಸಿಟ್ಟರು. ತುಂಬ ಭಕ್ತಿಯಿಂದ ತಮ್ಮ ಹೃದಯದ ಅಳಲನ್ನೆ ನಿವೇದಿಸುವಂತೆ ತಾಯಿ ಮಗಳಿಬ್ಬರೂ ದೇವರ ಮೂರ್ತಿಗೆ ತಲೆವಾಗಿ ಕೈ ಮುಗಿದರು.

○ ○ ○ ○ ○ ○ ○ ○

ಶಾಮಲೆಯ ಮನೆಯಲ್ಲಿ ಮೂಡಿದ ಆನಂದವೆ ಕೃಷ್ಣನ ಮನೆಯಲ್ಲಿಯೂ ಮೂಡಿತ್ತು. ಊರಲ್ಲೆಲ್ಲ ಆ ಸಂಭ್ರಮದ ಪ್ರತೀಕವಾಗಿ ಕಮಲವ್ವ ಪೇಡೆ ಹಂಚಿದರು. ಬಂದವರು, ಹೋದವರು, ಎಲ್ಲರೆದುರಿನಲ್ಲಿಯೂ ಮಗನ ಗುಣಗಾನವೆ ಗುಣಗಾನ. ಅವರ ಮನೆಯ ಪಡಶಾಲೆ ಪುಟ್ಟ ಸಭೆಯೆ ಆಗಿತ್ತು. ಹಳ್ಳಿಯ ಜನ ಎಲ್ಲರೂ ಹೊರಟುಹೋದ ಮೇಲೆ ಅಡಿಗೆ ಮನೆಯ ಚಿಲ್ಲರೆ ಕೆಲಸ ಮುಗಿಸಿ ಕಮಲವ್ವ ಹೊರಗೆ ಬಂದರು. ಸಂತೋಷದ ಭರದಲ್ಲಿರುವ ಶಾಮರಾಯರು ಪತ್ನಿಗೆ ಹೇಳಿದರು.

"ಅಲ್ಲಽ ಇದೆಲ್ಲ ನಿನ್ನ ಸೊಸಿಕಾಲಗುಣ ನೋಡ...."

ಹೌದೇಳ್ರಿ ನನಗೆಲ್ಲ ಗೊತ್ತಾದ ಕಾಲಗುಣಾನೊ, ಕೈಗುಣಾನೊ! ಈಗಳಿಂದನಽ ಹಿಂಗ ಹೊಗಳಲಿಕ್ಕ ಹತ್ತಿದಿರಿ ಅಂದರ ನಾಳೆ ಅಟ್ಟದ ಮ್ಯಾಲೆ ಏರಿಕೂತಾಳು. ಈಗಿನ ಹುಡಿಗೆಯರೇನು ಕೇಳೂದದ್ಕ?"

ಕಮಲವ್ವ ಕೆಣಕುವ ಸ್ವರದಲ್ಲಿ ಕೇಳಿದರು.

"ಅವ್ವಾ, ಎಲ್ಲಾ ಸುಳ್ಳು ನೋಡು. ನಿನ್ನ ಪುಣ್ಯಾದಿಂದಽ ನಾ ಪಾಸಾದೆ"

ಕೃಷ್ಣ ವ್ಯಂಗ್ಯವಾಗಿ ನುಡಿದ. ತಾಯಿಯ ಈ ನುಡಿಗಳಿಂದ ಅವನಿಗೆ ಸಂತಾಪವಾಗಿತ್ತು. ತಂದೆ ಒಂದು ಮಾತನ್ನೂ ಪ್ರತಿಯಾಗಿ ಆಡದೆ

ಕುಳಿತಿರುವದನ್ನು ಕಂಡು ಮನಕರಗಿತ್ತು. ಏನಾದರೇನು? ಬಹಳ ವರ್ಷಗಳ ಬೇಡಿ ಒಂದೇ ಮಾತಿನಿಂದ ಕತ್ತರಿಸಿ ಹೋದೀತೆ ?

" ಸೋಭನಾ ಒಂದ ಮುಗಿಸಿ ಬಿಡೂಣಲ್ಲ ?"

ಶಾಮರಾಯರು ಏನೋ ಜ್ಞಾಪಕವಾದ ಹಾಗೆ ಕೇಳಿದರು.

" ವಗ್ನ ಕೆಲಸಾಗೂತನಕ ಯಾವುದೂ ಬ್ಯಾಡ "

ಖಡಾಖಂಡಿತವಾಗಿ ನುಡಿದು ಬಿಟ್ಟರು ಕಮಲಪ್ಪ. ಅವರ ಮಾತಿಗೆ ಎದುರು ಹೇಳುವ ಧೈರ್ಯ ಯಾರಿಗೆ ?

"ಹಿಂಗs ಮಾಡೂಣ.... ಹಂಗs ಮಾಡೂಣ...."

ನಿರಾಸೆಯ ಧ್ವನಿಯಲ್ಲಿ ಅದೂ ಅತಿ ನಮ್ರರಾಗಿ ಹೇಳಿದರು ಶಾಮರಾಯರು. ಹಾಗೆಯೆ ಮುಂದುವರಿದು-

" ಒಂದ ಚೀಟಿ ಬರದು ಕೃಷ್ಣನ ಮಾವಗ ತಿಳಿಸಿ ಬಿಡೂಣ? "

ಎಂದು ಕೇಳಿದರು ಮೊದಲಿನ ಹಾಗೆಯೆ.

" ಯಾಕ ಅವರಕಿಂತ ನಿಮಗs ಹೆಚ್ಚು ಅವಸರ ಕಾಣಸ್ತದs ವರನ ತಂದಿ ಅನ್ನೂ ಅರಿವs ಇಲ್ಲೇನು ? ಅಷ್ಟು ಅವಸರ ಇದ್ದರ ಬೇಕಾರ ಬಂದ ಕೇಳತಾರ. "

" ಅಲ್ಲs ನಿಷ್ಟಿಗೆ ಬರಬ್ಯಾಡs. ಅವರಿಗೆ ಅವಸರ ಅದs ಅಂತ ಪತ್ರಾ ಕೊಟ್ಟು ಕಳಿಸ್ಯಾರ" !

" ಹಿಂಗ ಬ್ಯಾರೆ ಏನು ? ಇಷ್ಟೊತ್ತನಕ-ಯಾಕ ಹೇಳ್ಲಿಲ್ಲs ? ಖುಲಾಸ ಬರದ ತಿಳಸ್ರಿ ಮಗ್ಗ ನವಕರಿ ಸಿಗೋತನಕ-ಏನೂ ಮಾಡ್ಡಂಗಿಲ್ಲ ಅಂತ".

ಎಂದು ಹೇಳುತ್ತ ಅಡಿಗೆ ಮನೆಯೆಡೆಗೆ ಸಾಗಿದ ಕಮಲಪ್ಪ ಏನೋ ನೆನಪಾದವರ ಹಾಗೆ ಮರಳಿ ಬಂದು ಹೇಳಿದರು.

" ಎಲ್ಲ್ಯಾರೆ ಸ್ವಲ್ಪ ಕೈ ಬೆಚ್ಚಗ ಮಾಡಿದರೂ ಚಿಂತಿಲ್ಲ. ಅಷ್ಟು-ಕೃಷ್ಣಗ ಒಂದ ನವಕರಿ ನೋಡ್ರಿ.... "

" ಅದನ್ನ-ನಾನೂ ಯೋಚನಾ ಮಾಡತಿದ್ದೆ.... "

ಕಮಲಪ್ಪ ತಮ್ಮ ಅಡಮನೆಗೆ ನಡೆದರು. ಶಾಮರಾಯರು ಗಾಢವಾದ ನಿಟ್ಟುಸಿರೊಂದನ್ನು ತೇಲಿಬಿಟ್ಟರು. ಪಕ್ಕದಲ್ಲಿಯೆ ಇದ್ದ ಕೃಷ್ಣ ಅದನ್ನು ಕಂಡುಕೊಂಡ.

" ಗಂಡಸಾಗಿಯೂ ಈ ಗತಿಯೆ? ....

"ಛೀ- ಖಂಡಿತ ನಾನು ಹೀಗೆ ಸೆರೆಯಾಳಾಗಲಾರೆ...."

ಎಂದೇನೊ ಮನದಲ್ಲಿ ಎಣಿಕೆ ಹಾಕುತ್ತ ತಲೆ ಅಲುಗಾಡಿಸಿದ ಕೃಷ್ಣ. ತಲೆ ತುಂಬ ವಿಚಾರ ಚಕ್ರ ರಭಸದಿಂದ ಸುತ್ತುತ್ತಿತು.

೩

ಶಾಮರಾಯರು ಜಿಲ್ಹಾಧಿಕಾರಿಗಳ, ಅವರ ಮುಖ್ಯ ಕಾರಕೂನರ ಮನೆಗೆ ತಿರುಗುವದು ಆರಂಭವಾಯಿತು. ಮಗನಿಗೆ ಕೆಲಸ ಕೊಡಿಸುವ ದಕ್ಕಿಂತಲೂ ಪತ್ನಿಯ ಅಧಿಕಾರದ ವಾಣಿಗೆ ತಲವಾಗಿ ಅವರು ಈ ಕಾರ್ಯ ಕೈಕೊಂಡಿದ್ದರು. ಕೈ ತುಂಬ ಹಣ ಕಳೆದುಕೊಂಡು ಮೂರು ತಿಂಗಳು ಕಳೆದ ಮೇಲೆ ಕೃಷ್ಣನ ಅದೃಷ್ಟ ತೆರೆಯಿತೇನೋ ಎನ್ನುವಂತೆ ತಾಲೂಕ್ ಕಚೇರಿಯ ಕಾರಕೂನಕಿಯ ಕೆಲಸ ಒಂದು ದೊರೆಯಿತು. ಒಂದು ಶುಭ ಮುಹೂರ್ತ ನೋಡಿ ಫಲ ಶೋಭನದ ಕಾರ್ಯವೂ ಮುಗಿದು ಹೋಯಿತು. ಒಂದು ವಾಚನ್ನು, ಮತ್ತ ಮೂರು ತೊಲೆ ಬಂಗಾರದ ಉಂಗುರವನ್ನು ಮಾವನಿಂದ ಕೃಷ್ಣ ಗೋಪಾಳವಾಗಿ ತೆಗೆದುಕೊಂಡ ತಾಯಿಯ ಆಡಳಿತ ದಲ್ಲಿ. ಎಷ್ಟಾದರೂ ಕೃಷ್ಣ ಕಚೇರಿಯ ಕಾರಕೂನನಲ್ಲವೇನು?

ಕೆಲಸ ದೊರೆತ ಮೇಲೆ ಕೃಷ್ಣ ನಗರ ಸೇರಬೇಕಾಯಿತು ಶಾಮ ರಾಯರೂ ಮಗ-ಸೊಸೆಯರ ಜತೆಗೆ ಇರಬೇಕೆಂದು ಆಸೆಪಟ್ಟರೂ ಕಮಲವ್ವ ಹಾಗೆ ಆಸೆಪಡಲಿಲ್ಲ. ಹಳ್ಳಿಯಲ್ಲಿ ಸಿಗುವ ಗೌರವ, ಮರ್ಯಾದೆ ಪಟ್ಟಣದಲ್ಲಿ ದೊರೆಯಲಾರದೆಂದು ಅವರಿಗೆ ಗೊತ್ತು. ಇಲ್ಲಿ ದರ್ಪ—ದೌಲತ್ತುಗಳಿಂದ ಮನೆಯ ಜನಗಳನ್ನಷ್ಟೆ ಅಲ್ಲ, ಹಳ್ಳಿಗರ ಮೇಲೆಯೂ ಅಧಿಕಾರ ನಡೆಯಿಸು ವಂತೆ ನಗರದಲ್ಲಿ ನಡೆಯಿಸಲು ಬಂದೀತೆ? ಆದಕ್ಕಾಗಿಯೆ ಅವರು ತಾವಿದ್ದ ಹಳ್ಳಿಯನ್ನು ಬಿಟ್ಟು ಮಗನ ಜತೆಗೆ ಹೋಗಲು ಸುತರಾಂ ಸಮ್ಮತಿಸಲಿಲ್ಲ. ಅವರೇ ಹಿಂದಲೇಟು ಹಾಕಿದ ಮೇಲೆ "ಅಮ್ಮಾವ್ರ ಗಂಡ" ಶಾಮರಾಯರು ಕೊಹರಲು ಸಾಧ್ಯವೆ? ತಮ್ಮ ಮನದ ಆಸೆಗಳನ್ನೆಲ್ಲ ಹೋಮ ಮಾಡಿ ಪತ್ನಿಯ ಜತೆಗೆ ಹಳ್ಳಿಯಲ್ಲಿ ಬಾಳಲು ಅವರೂ ನಿರ್ಧರಿಸಿದರು. ಕೊನೆಗೆ ನಿರ್ಣಯವಾದದ್ದು ಕೃಷ್ಣ—ಶಾಮಲೆ ಇಬ್ಬರೆ ನಗರಕ್ಕೆ ಹೋಗುವದೆಂದು.

ತಾಯಿಯ ಈ ನಿರ್ಣಯವನ್ನು ಕಂಡು ಕೃಷ್ಣನಿಗೆ ಪುತ್ರಸಂತಾನವಾದಷ್ಟು ಸಂತೋಷವಾಯಿತು.

"ಪೆರಿಯಕ್ಕನ ಹಾಳಿ ಮನೆಯ ಮುಂದಿಗೆಲ್ಲ' ಆಗಬಾರದು ತಾನೆ? ತಾಯಿಯ ಜತೆಗೇ ಶಾಮಲೆಯೂ ಇದ್ದರೆ ಅಮ್ಮನ ದಾರಿಯನ್ನೇ ಅವಳೂ ತುಳಿಯಬಹುದೆಂಬ ಹೆದರಿಕೆ ಇತ್ತು ಕೃಷ್ಣನಿಗೆ. ತಾಯಿ ನಿರ್ಣಯದಿಂದ ಆ ಹೆದರಿಕೆ ಹಾರಿಹೋಯಿತು.

ಪತ್ನಿಯನ್ನು ಕರೆದುಕೊಂಡು ನಗರದಲ್ಲಿ ವಾಸವಾಗಿ, ಅವಳನ್ನು ತನ್ನ ಇಷ್ಟಾನುವರ್ತಿನಿಯನ್ನಾಗಿ ಮಾಡಿಕೊಂಡು ಅಧಿಕಾರ ಚಲಾಯಿಸಿದ ಕನಸು ಕಂಡ ಕೃಷ್ಣನ ಹೃದಯ ನಕ್ಕಿತು.

ಅಂತಹ ನಗೆಯನ್ನೇ ಶಾಮಲೆಯೂ ನಕ್ಕಳು.

"ಅತ್ತೆ, ಮಾವ ಯಾರೂ ಜತೆಗೆ ಹೊರಡುವ ಹಾಗಿಲ್ಲ. ತಾವಿಬ್ಬರೇ ಇಬ್ಬರಾದಾಗ ಇಷ್ಟು ವರುಷಗಳ ತಪಸ್ಸಿನ ಫಲ ಫಲಿಸದಿದ್ದೀತೆ? ಪತಿಯನ್ನು ಬೇಕಾದ ಹಾಗೆ ಅಂಕಿತದಲ್ಲಿಟ್ಟುಕೊಳ್ಳಬಹುದು. ನರಕದ ಬಾಳನ್ನು ತಪ್ಪಿಸಬಹುದು. ತಂದೆಯ ಮನೆಯಲ್ಲಿ ಕಷ್ಟಪಟ್ಟಂತ ಪತಿಯ ಮನೆ ಸೆರೆಮನೆಯಾಗಲಿಲ್ಲ"ವೆಂದು ನೆನೆದಾಗ ಶಾಮಲೆಗೆ ಎಂತಹ ಸಂತೋಷ.

ಕೃಷ್ಣ-ಶಾಮಲೆಯರು ಹೊರಡುವ ದಿನವನ್ನೇ ಎಣಿಕೆಹಾಕುತ್ತಿದ್ದರು. ಒಂದು ದಿನವನ್ನು ಕಳೆಯುವುದೂ ಒಂದು ಯುಗ ಕಳೆದು ಹೋದಷ್ಟು ಕಾಣುತ್ತಿತ್ತು. ಬೇಗನೆ ಆ ಅಮೃತ ದಿನ ಬಾರದೇ? ಎಂದು ಮನದಲ್ಲಿ ಲೆಕ್ಕ ಹಾಕುತ್ತಿದ್ದರು. ಪಾಪ! ಅವರ ಮನದ ಓಟದ ಮುಂದೆ ಕಾಲ ಎಷ್ಟು ಓಡೀತು?

ಮನೆ-ಗಿನೆ ಬಾಡಿಗೆ ಹಿಡಿದು ಎಲ್ಲ ವ್ಯವಸ್ಥೆ ಮಾಡಿ ಮರಳ ಬೇಕಾದರೆ ಶಾಮರಾಯರಿಗೆ ತಡವಾಯಿತು ಎರಡು ದಿನ. ಮರುದಿನವೆ ಶುಭಮುಹೂರ್ತವಿದ್ದ ಮೂಲಕ ಹೊರಡುವದೆಂದು ಅವರು ಬಂದ ಚಣವೆ ಕಮಲವ್ವ ನಿಷ್ಕರ್ಷಿಸಿದ್ದರು.

ಬೆಳಕೂ ಮೂಡಿತು. ಸ್ವತಂತ್ರ ವಾತಾವರಣದಲ್ಲಿ ಹಕ್ಕಿಯಂತೆ ಹಾಯಾಗಿ ಜೀವಿಸುವ ಅರುಣೋದಯ ಕೃಷ್ಣ-ಶಾಮಲೆಯರಿಗೆ ನವ

ನವೀನವಾಗಿ ತೋರಿತು. ಬೀಸುತ್ತಿರುವ ಗಾಳಿಯಲ್ಲಿಯೂ ಹೊಸತನ ಕಂಡಿತು ಅವನಿಗೆ. ಎಲ್ಲೆಲ್ಲಿಯೂ ಹೊಸ ಜ್ಯೋತ್ಸ್ನ ತುಂಬಿ ತುಳುಕಾಡು ತ್ತಿರುವ ಹಾಗೆ ಭಾಸವಾಗುತ್ತಿತ್ತು.

ಸೂರ್ಯ ಆಗತಾನೆ ಮೂಡಿದ್ದ. ಅವನ ಬಂಗಾರ ಕಿರಣಗಳು ಜಗವನ್ನು ನಕ್ಕುನಲಿಸುತ್ತಿದ್ದವು. ಅದೇ ವೇಳೆಗೆ ಯಂತ್ರವಾಹನದ ಯಾವ ಸೌಕರ್ಯವೂ ಇರದ ಮೂಲಕ ಬಂಡಿಯನ್ನೆ ಹೂಡಿ ನಿಲ್ಲಿಸಿದ ಒಕ್ಕಲುಮಗ್ಗ ಪುಟ್ಟ ಸಂಸಾರಕ್ಕೆ ಬೇಕಾಗುವ ಪಾತ್ರೆ-ಪದಾರ್ಥಗಳನ್ನೆಲ್ಲ ಗೋಣಿ ಚೀಲದಲ್ಲಿ ತುಂಬಿ ಚಕ್ಕಡಿಯಲ್ಲಿಟ್ಟರು. ರಾಮರಾಯರು ಬಿಸಿಲಾಗುವ ದೆಂದು ಅವಸರ ಮಾಡಿದಾಗ ಶಾಮಲೆ-ಕೃಷ್ಣ ಚಕ್ಕಡಿಯ ಬಳಿಗೆ ಬರಬೇಕಾ ಯಿತು. ಕಮಲವ್ವ ತಮ್ಮ ಅಡಿಗೆ ಮನೆಯಿಂದ ಹೊರಗೆ ಬಂದರು.

"ಹೋಗಿ ಬರತೀನಿ ಅತ್ತೀವ್ರ"

ಶಾಮಲೆ ಕಮಲವ್ವನವರ ಕಾಲಿಗೆ ನಮಸ್ಕರಿಸಿದರು. ಅವರು ಅವಳನ್ನು ಪ್ರೈದಡವಿ ಮೇಲಕ್ಕೆತ್ತಿ

"ಹೋಗಿ ಬಾರವ, ಮುತ್ತೈದಿ ಸಾವಿತ್ರಿಯಾಗು...."

ಎಂದು ತುಂಬಿದ ಮನದಿಂದ ಆಶೀರ್ವದಿಸಿದರು. ಕೃಷ್ಣನ ಹೃದಯ ದಲ್ಲಿ ಮಾತ್ರ-ಒಂದು ಚಣಕಾಲ ಮಥನ ನಡೆಯಿತು. ತಾಯಿಗೆ ನಮಸ್ಕರಿ ಸುವದಕ್ಕೂ ಅವನ ಮನಸ್ಸು ಒಡಂಬಡಲಿಲ್ಲವಾದರೂ ಸ್ವತಂತ್ರ ವಾತಾವರ ಣದಲ್ಲಿ ಜೀವಿಸುವ ಒಂದು ಬಗೆಯ ಆನಂದದಿಂದ ನಮಸ್ಕರಿಸಿದ.

"ಉದ್ದಂಡ ಆಯುಷ್ಯವಂತನಾಗು. ನಾಕಮಕ್ಕಳ ತಂದಿ ಆಗು...."

ಎಂದು ಮಗನನ್ನು ತುಂಬ ಹರಿಸಿದರು. ಕೃಷ್ಣ, ಶಾಮಲೆ, ರಾಮ ರಾಯರು ಬಂಡಿ ಏರಿ ಕುಳಿತರು.

"ಅವರ್ನ ಕಳಿಸಿ ಒಂದೆರಡ ದಿನದಾಗ ಲಗೂನ ಬರ್ರಿ."

ಎಂದು ಪತಿಯನ್ನು ಎಚ್ಚರಿಸಿ—

“ಶಾಮಲಾ ಜ್ವಾಕೆವ್ವಾ!....ಕೃಷ್ಣಾ ಮನಿ ಚಲೋತ್ನಾಗ ನೋಡಿಕೊ ....ಒಬ್ಬಾಕೀನ ಮನ್ಯಾಗ ಇರಬೇಕಾಗತ್ತದ. ಲಗೂನ ಮನಿಗೆ ಬಂದಬಿಡು ...”

ಎಂದೆಲ್ಲ ಏನೇನೋ ಹೇಳುತ್ತಿರುವಾಗಲೇ ಆಳುಮಗ ಎತ್ತುಗಳ ಬೆನ್ನು ಚಪ್ಪರಿಸಿದ. “ಗಡ ಗಡ” ಎಂದು ಚಕ್ರ ಉರುಳುತ್ತಿರುವಂತೆ ಬಂಡಿ ಮುಂದೆ ಸಾಗಿತು. ಅವರು ಮರೆಯಾಗುವವರೆಗೂ ನೋಡುತ್ತ ನಿಂತ ಕಮಲವ್ವ ನಿಧಾನವಾಗಿ ಮನೆಗೆ ನಡೆದರು.

ಆರು ತಾಸು ಹೊತ್ತೇರುವದರಲ್ಲಿ ಚಕ್ಕಡಿ ನಗರನ್ನು ಸೇರಿತು. ಶಾಮರಾಯರು ತಮ್ಮ ಒಕ್ಕಲಿಗೆ ಸಲಹೆಗಳನ್ನೀಯುತ್ತ ಮನೆಯವರೆಗೂ ಬಂಡಿಯನ್ನೊಯ್ದರು. ಎಲ್ಲ ಸಾಮಾನು ಸರಂಜಾಮುಗಳನ್ನೂ ಮನೆಯಲ್ಲಿಟ್ಟು ಊಟವಾಗಿ ಹೊರಡಬೇಕಾದರೆ ರಾಯರಿಗೆ ಸಂಜೆಯಾಯಿತು. ಮಗ-ಸೊಸೆಯರ ನಿರೂಪ ಪಡೆದು ಅವರು ತಮ್ಮ ಆಳು ಮನುಷ್ಯನೊಂದಿಗೆ ಹೊರಟು ಹೋದರು.

“ಕೃಷ್ಣ-ಪತ್ನಿಯನ್ನು ಕರೆದುಕೊಂಡು ಮನೆಯಲ್ಲಿ ಎಲ್ಲ ಸಾಮಾನು ಸರಂಜಾಮುಗಳನ್ನು ಸರಿಯಾಗಿಡುವದರಲ್ಲಿ ಹೊತ್ತನ್ನು ಕಳೆದ. ನಿಜವಾಗಿಯೂ ಆ ಮನೆಯನ್ನು ಕಂಡು ಅವನಿಗೆ ಅಚ್ಚರಿಯಾಗಿತ್ತು. ತಂದೆ ಬಾಡಿಗೆಗೆ ಮನೆ ಹಿಡಿಯಲು ಹೊರಡುವಾಗ ತಾಯಿ-

“ಒಂದ ಅಡಗೀಮನಿ ಒಂದ ಬಚ್ಚಲಮನೀ. ಒಂದ ಪಡಸಾಲಿ-ಖೋಲಿ. ಇಷ್ಟ ಇರಬೇಕು ಮನ್ಯಾಗ.”

ಎಂದು ಹೇಳಿದ ಒಂದು ಮಾತನ್ನೂ ತೆಗೆದುಹಾಕದ ತಂದೆಯ ಸ್ಥಿತಿಯನ್ನು ಕಂಡು ಅವನಿಗೆ ವಿಚಿತ್ರವೆನಿಸಿತು. ಆ ಮನೆಯಲ್ಲಿ ತಾಯಿ ಹೇಳಿದುದಕ್ಕಿಂತ ಒಂದು ಖೋಲಿಯಾಗಲಿ, ಒಂದು ನಡುಮನೆಯಾಗಲಿ ಯಾವದೂ ಹೆಚ್ಚಿಗಿರಲಿಲ್ಲ.

“ಅಬ್ಬ! ಹೆಣ್ಣಿನ ಅಧಿಕಾರ ಎಂದರೆ ಇಷ್ಟು ದೊಡ್ಡವೆ?”

ತನ್ನಲ್ಲಿಯೆ ತಾನು ಯೋಚಿಸಿಕೊಂಡ ಕೃಷ್ಣ. ಅವನಿಗೆ ತಂದೆಯ ಸ್ಥಿತಿಗಾಗಿ ನಗು ಉಕ್ಕಿಬಂತು.

"ಯಾಕ ನಗತೀರಿ ಹಂಗs ...?"

ಪಕ್ಕದಲ್ಲಿಯೆ ಇದ್ದ ಶಾಮಲೆ ಪತಿಯನ್ನು ವಿಚಿತ್ರವಾಗಿ ನೋಡುತ್ತ ಕೇಳಿದಳು. ತಾನು ಹಳ್ಳಿಯವಳು ತನ್ನನ್ನು ಕಂಡೇನಾದರೂ ನಗುತ್ತಿರಬಹುದೆ? ಎಂದು ಸಂಶಯ ಆ ಹುಚ್ಚು ಹುಡುಗಿಗೆ.

"ಯಾಕೂ ಇಲ್ಲೇಳು....ನಗಿಬಂತು ಸಕ್ಕೆ........"

"ಸುಮಸುಮ್ಮನ ಅದ್ಹ್ಯಾಂಗ ನಗಿಬರ್ತದ? ........"

'ನಿನ್ನ ಮೋತಿ ನೋಡಿ ಸಕ್ಕೆ...."

ಕೃಷ್ಣ ನಗುತ್ತ ಹೇಳಿದ. ಶಾಮಲೆಗೆ ಒಂದು ಬಗೆಯ ಸಮಾಧಾನವಾಗಿರಬೇಕು. ಇಲ್ಲಿನ ಹೊಸ ಸಂಸಾರದ ಆರಂಭದ ದಿನ ಅದು. ಹೆಚ್ಚಿಗೆ ಪತಿಯ ಜತೆಗೆ ಮಾತನಾಡುವಷ್ಟೆಂವರೆ ಒಂದು ಬಗೆಯ ನಾಚಿಕೆ ಬೇರೆ. ಅದಕ್ಕಾಗಿಯೇನೋ ಅಂತು ಮೌನ ತಳೆದಳು.

ಒಂದೆರಡು ವಾರಗಳು ಹೀಗೆಯೆ ನಾಚಿಕೆ. ಹೊಸತನಗಳಲ್ಲಿಯೆ ಕಳೆದವು. ಹೆಚ್ಚು ಮಾತುಗಳನ್ನೂ ಪರಸ್ಪರರು ಆಡುತ್ತಿರಲಿಲ್ಲ. ಎಷ್ಟೋ ಅಷ್ಟೆ. ಪತಿ ಪತ್ನಿಯರಾದ ಮೇಲೆ ಅದರಲ್ಲಿಯೂ "ಮನೆಯಲ್ಲಿ ಯಾರೂ ಇರದಾಗ ಆ ಲಜ್ಜೆ. ಆ ಜೀವನ ಎಷ್ಟು ದಿನಗಳ ಕಾಲ ನಿಂತೀತು? ಕಾಲ ಓಡುತ್ತಿರುವಂತೆ—ಅವರಲ್ಲಿ ನಿರ್ಭಯತೆ ನೆಲೆಸಿಲ್ಲಲಾರಂಭಿಸಿತು. ಇಬ್ಬರಲ್ಲಿಯೂ ಹುಡುಗದ ಹಳೆಯ ಹಂಬಲು ತಲೆ ಎತ್ತಿತು.

ಹನ್ನೊಂದುವರೆ ಗಂಟೆಗೆ ಅಂದು ಆಫೀಸಿಗೆ ಹೊರಡಲು ಸನ್ನದ್ಧನಾಗಿ ನಿಂತಿದ್ದ ಕೃಷ್ಣ. ಶಾಮಲೆ ಎಲೆ ಅಡಿಕೆಯ ನೆವಮಾಡಿ ಒಳಕ್ಕೆ ಕರೆದಳು.

"ಏನು?"

"ಎಲಿ ಅಡಿಕಿ ಹಕ್ಕೊಂಬೂದುಲ್ಲೇನ?"....

ಎಂದು ಪತಿಯನ್ನು ಓರೆಗಂಗಳಿಂದ ನೋಡುತ್ತ ಡಬ್ಬವನ್ನು ಮುಂದಿಟ್ಟಳು.

ಕೃಷ್ಣ ಮೌನವಾಗಿ ಎಲೆ ಅಡಿಕೆ ಜಗಿಯಲಾರಂಭಿಸಿದ

"ಇವತ್ತ ಆಫೀಸ ಬಿಟ್ಟ ಬರುವಾಗ ಮಲ್ಲಿಗಿ ಹೂ ತರ್ರಿ."

"ಆಪೀಸ ಅಲ್ಲ ಆಫೀಸ್ ಅನ್ನು ನೆಟ್ಟಗ..."

"ಆಪೀಸೊ–ಗೀಪಿಸೊ ಏನಾರ ಇರಲಿ. ಹೂವಾತ್ರ ತರಬೇಕು.

''ದಿವಸಾ ದಿವಸಾ ನಿನಗೆ ಹೂಬೇಕೇನು?"

ಕೊಂಚ ಏರಿಕೆಯ ಸ್ವರದಲ್ಲಿ ಕೇಳಿದ ಕೃಷ್ಣ. ಈಗ ಎರಡು ವಾರವಾಯಿತು. ಅವಳು ಹೇಳಿದ ಹಾಗೆ ಹೂ ತಂದೇ ತರುತ್ತಾನೆ. ಇಂದು ಮಾತ್ರ ಸುಪ್ತವಾಗಿ ಮಲಗಿದ ಹಂಬಲು ಜಾಗ್ರತವಾಗಿತ್ತು ಪತ್ನಿಗೆ ಅಷ್ಟು ಸಲಿಗೆ ಕೊಡಬಾರದೆಂದು ಆ ಹಂಬಲು ನೊರೆಯುಕ್ಕು ತ್ತಿತ್ತು. ಶಾಮಲೆಗೇನು ಗೊತ್ತು ಗಂಡನ ಇಂದಿನ ಮನಸ್ಸು? ಅವಳು ಆಶ್ಚರ್ಯದಿಂದ ಕೇಳಿದಳು.

''ನಾ ಹೂವಿನ ಸಾಲಿ ಹಕ್ಕೋಬಾರದ್ಯ?''

ಆಸೆಗಂಗಳಿಂದ ಅವಳು ಪತಿಯ ಉತ್ತರವನ್ನು ಕಾಯುತ್ತಿದ್ದಳು.

''ಹೇss. ಹಕ್ಕೋಲಿಲ್ಲಂದ್ರ ಹೆಂಗ ಮತ್ತs? ಮಹರಾಣಿಯವರು ಅಲ್ಲೇನು ನೀವು?''

ಕೃಷ್ಣನ ಶಬ್ದಶಬ್ದದಲ್ಲಿಯೂ ವ್ಯಂಗ್ಯತೆ ಕುಣಿದಾಡುತ್ತಿತ್ತು. ಅವನು ಅವಳ ಉತ್ತರವನ್ನೂ ಕಾಯದೆ ಹೊರಟು ಹೋದ. ಅವನ ಮನೋಭಾವನೆ ಮಾರ್ನುಡಿಯುತ್ತಿತ್ತು.

''ಹೆಂಡತಿಗೆ ಅಷ್ಟು ಸಲಿಗೆ ಕೊಡಕೂಡದು. ಅವಳನ್ನು ಬಂಧನದಲ್ಲಿರಿಸಬೇಕು....''

ಅಂತಹದೆ ಎಚ್ಚತ್ತ ಧ್ವನಿಯೊಂದು ಶಾಮಲೆಯ ಹೃದಯ ಗರ್ಭ ದಿಂದುದಿಸಿ ಬರುತ್ತಿತ್ತು.

''ಈ ಗಂಡಸರ ಜಾತಿಯೇ ಹೀಗೆ. ಖಂಡಿತ ಇವರನ್ನು ಹತೋಟಿ ಯಲ್ಲಿಟ್ಟುಕೊಳ್ಳಬೇಕು....''

ಇಂದಿನ ಸೋಲಿನಿಂದ ಹೆಡೆ ತುಳಿಯಿಸಿಕೊಂಡ ಹಾವಿನಂತಾಗಿದ್ದಳು ಶಾಮಲೆ. ಅವಳ ಮನಸ್ಸು ಎನೇನೊ ಎಣಿಕೆ ಹಾಕುತ್ತಿತ್ತು.

"ಒಂದು ನಾಲ್ಕು ಹೂಗಳಿಗಾಗಿ ಈ ಹಾಡೆ? ಹೊ ಹೆಣ್ಣುಮಕ್ಕಳ ಇಷ್ಟ ದೇವರೆನ್ನುವದು ಇವರಿಗೆ ಗೊತ್ತಿಲ್ಲವೆ? ಹೆಂಡತಿಯಾದವಳಿಗೆ ಹೀಗೆಲ್ಲ ಮಾತನಾಡಬಹುದೆ? ನನ್ನನ್ನು ಏನೆಂದು ತಿಳಿದುಕೊಂಡಿದ್ದಾರೊ....

"ಹೆಂಡತಿಯನ್ನು ಕಾಲಿನಿಂದ ತುಳಿಯಬೇಕೆಂಬ ಆಸೆ ಅವರ ಧ್ವನಿಯಲ್ಲಿ ವ್ಯಕ್ತವಾಗುತ್ತಿರಲಿಲ್ಲವೆ?

"ತುಳಿಯಲಿ ನೋಡೋಣವಂತೆ ...

'ಏನಾದರೂ ನಾನಂತೂ ಅಮ್ಮನಂತೆ ಸೆರೆಯಾಳಾಗಲಾರೆ ..."

ಶಾಮಲೆಯ ನಿರ್ಧಾರದ ವಾಣಿ.

ಆಫೀಸ್ ಬಿಟ್ಟ ಮೇಲೆ ಕೃಷ್ಣ ಮನೆಗೆ ಮರಳಿದ. ಕೋಟು ಕಳಚಿ ಹಾಕುತ್ತಿರುವಾಗ ಶಾಮಲೆ ಅಲ್ಲಿಗೆ ಬಂದುಬಿಟ್ಟಳು.

"ಹೂವು ತಂದೀರೇನು?"

"ಮನಿಗೆ ಬರೂ ಪುರುಸತ್ತಿಲ್ಲ ಸುರೂಸ್ತು ಏನು ನಿನ್ನ ಪುರಾಣ?"

ಕೃಷ್ಣನ ಧ್ವನಿಯಲ್ಲಿ ಬೇಸರ ದರ್ಪ ಸಮಸಮವಾಗಿ ಬೆರೆತು ನಿಂತಿದ್ದವು.

"ಅಲ್ಲ; ಇವತ್ಯಾಕೊ ವಿಚಿತ್ರ ಆಗಿರಲ್ಲ ಯಾಕ? .."

"ನಿನ್ನ ಪುಣ್ಯಾದಿಂದ ..."

ಕೃಷ್ಣನ ಒರಟು ಉತ್ತರವನ್ನು ಕೇಳಿ ಶಾಮಲೆಗೆ ಕೋಪ ಬಂತು. ಆದರೂ ಅದನ್ನು ತಡೆದು ಹಿಡಿದು, ಕೇಳಿದಳು.

"ಹೂ ತಂದೀರೇನು ಅಂತೂ ಕೇಳಬಾರದ್ಯ?"

"ಓ, ನೀವು ಕೇಳ್ಳಿಲ್ಲ ಅಂದ್ರ ಹೆಂಗ್ರಿ? ಅಧಿಕಾರ ಅಂಗಿ ಅಲ್ಲೇನು?.... ಗಂಡನ ಮ್ಯಾಲೆ ಅಧಿಕಾರ ನಡಿಸಬೇಕನ್ನೂದು ಹೆಂಗಸಿನ ಹುಟ್ಟಗುಣ...."

ತುಂಬ ಗಡುಚಾಗಿತ್ತು ಅವನ ಧ್ವನಿ.

"ಹೆಂಗಸಿನ ಹುಟ್ಟಗುಣ ಅಂತ!.... ಅದ್ಯಾಕ ನಮ್ಮನ್ನು ಗಂಡಸಿನ ಹುಟ್ಟಗುಣ- ಹೆಂಗಸಿನ್ನ ಕೈದೀಹಂಗ ನಡಿಸಿಕೊಂಬೂದು.... ಹೂ ಕೇಳಿದರ ಎಷ್ಟು ಸಿಟ್ಟು.... ಏನ ಮಾತು...."

ಶಾಮಲೆಯ ಕೊರಳಿನಿಂದ ವಿಷದ ನುಡಿ, ವ್ಯಂಗ್ಯ ನುಡಿ ಹೊರ ಬರುತ್ತಿತ್ತು. ಅದನ್ನು ಕೇಳುತ್ತಿದ್ದ ಕೃಷ್ಣ ಕಣ್ಣು ಕೆಂಪಗೆ ಮಾಡಿ

"ಹೌದು-ಹೌದು. ನಾನs ಭಾಳ ಸಿಟ್ಟಿನವ.... ನೀ ಮಾತ್ರ.... ಶಾಂತಾದೇವಿ........"

ಶಾಮಲೆಯ ಕಣ್ಣಲ್ಲಿ ನೀರೂರಿತು. ಪರಾಭವ ಹೊಂದಿ ತಲೆತಗ್ಗಿಸಿ "ಕಣ"ದಿಂದ ತನ್ನ ಸ್ಥಾನಕ್ಕೆ ಹೋಗುವ ಜಟ್ಟಿಯಂತೆ ಅವಳು ಒಳಗೆ ನಡೆದಳು.

"ಹಂಗs ನಡದೆಲ್ಲ ಚಹಾ–ಗಿಹಾ ಏನಾರ ಕೊಡತಿಯೊ.... ಇಲ್ಲೊ?...."

ಶಾಮಲೆ ಯಾವ ಉತ್ತರವನ್ನೂ ಕೊಡಲಿಲ್ಲ. ಕೃಷ್ಣ ಸ್ವಲ್ಪ ಹೊತ್ತು ಮೊಗಶಾಲೆಯಲ್ಲಿ ಕುಳಿತಿದ್ದ. ಎರಡು ಮೂರುಸಲ ಚಹಕ್ಕಾಗಿ ಪತ್ನಿಯನ್ನು ವಿಚಾರಿಸಿದ. ಯಾವ ಜವಾಬೂ ಒಳಗಿನಿಂದ ಬರಲಿಲ್ಲ. ಎದ್ದು ಅಡಿಗೆ ಮನೆಗೆ ನಡೆದ. ಅಲ್ಲಿ ಶಾಮಲೆ ಇರಲಿಲ್ಲ. ಅವಳು ಮಲಗುವ ಕೊಟಡಿಗೆ ಬಂದ. ತುಂಬ ಬಿಗುಪಿನಿಂದ ಮಂಚದ ಮೇಲೆ ಹೊದ್ದುಕೊಂಡು ಮಲಗಿದ್ದಳು.

"ನಾ ವದರಿದ್ದು ನಿನಗ ಕೇಳಸಲಿಲ್ಲೇನು?...."

"....ಸೊಡ್ರಗ್ ... ಸೊಡ್ರಗ್...."

ಶಾಮಲೆಯ ಅಳುವಿನ ಧ್ವನಿ. ಕೃಷ್ಣನಿಗೆ ಇನ್ನೂ ಕೋಪಬಂತು. ಅವನು ಅಬ್ಬರಿಸಿದ.

"ಅಲ್ಲs ನಾ ಕರದದ್ದು ಕೇಳಸಲಿಲ್ಲೇನು?.... ಕಿವಿ ಕಿವಡಾಗ್ಯಾವೇನು?"

ಅವನ ಅಬ್ಬರದಲ್ಲಿ ಸೆರೆಯಾಳನ್ನು ಗದ್ದರಿಸುವ ಪೋಲೀಸನ ಅಧಿಕಾರ ದರ್ಪವಿತ್ತು. ದುಃಖಿಸುತ್ತ ಮಲಗಿದ್ದ ಶಾಮಲೆ ಅದನ್ನು ಗುರುತಿಸದೆ ಇರಲಿಲ್ಲ. ಕೃಷ್ಣನ ಪ್ರತಿಯೊಂದು ನುಡಿಯೂ ಅವಳಿಗೆ ತಂದೆಯ ಕಟುವಾಕ್ಯಗಳನ್ನು ನೆನಪಿಗೆ ತಂದವು. ಹಾಗೆ ನೆನಪಾದೊಡನೆಯೆ ಗಂಡನ ವಿಷಯದಲ್ಲಿ ಕರಗಿದ್ದ ಅಲ್ಪ—ಸ್ವಲ್ಪ ಅಂತಃಕರಣವೂ ಮತ್ತೆ ಬಿಗುವಾಯಿತು. ವೀರಸತ್ಯಾಗ್ರಹಿಯಂತೆ ಅವಳು ಪತಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.

"ನಾ, ಚಹಾದಂಗಡಿಗಾರ ಹೋಗಲೇನು...."

ಕೃಷ್ಣ ಮೊದಲಿನ ರೀತಿಯಲ್ಲಿಯೆ ಪತ್ನಿಯನ್ನು ಮಾತನಾಡಿಸಲೆತ್ನಿಸಿದ. ಶಾಮಲೆ ಮಾತ್ರ ತುಟಿ ಎರಡು ಮಾಡಲಿಲ್ಲ. ಕೆರಳಿದ ಅವನು

ಕಾಲುಗಳನ್ನು ಜೋರಾಗಿ ನೆಲಕ್ಕಪ್ಪಳಿಸುತ್ತ ನಡೆದ. ಹೆಣ್ತನದ ಧ್ವನಿ ಯೊಂದು ಪತಿಯನ್ನು ಕರೆದುಚಹಮಾಡಿಕೊಡಬೇಕೆಂದು ಅವಳನ್ನೆಚ್ಚರಿಸಿತು. ಆದರೆ ಪತಿಯ ಬಿಗುಹಿನ ಸದ್ದು ಅವಳ ಹೃದಯವನ್ನೇ ತುಳಿದಷ್ಟು ವ್ಯಥೆಯನ್ನಿತ್ತಿತು. ವಿವೇಕವನ್ನು ಕಳೆದುಕೊಂಡು ವ್ಯಥೆಪಡುತ್ತಿರುವ ಹೃದಯ ಉಸಿರಿಡುತ್ತಿತ್ತು.

"ಅವರಿಗೆ ಅಂತಹ ಕೋಪಬಂದರೆ ನನಗೆ ಅದಕ್ಕಿಂತಲೂ ಹೆಚ್ಚು ಬಂದೀತು ....ನಾನೆಂದರೆ ಸೆರೆಯಾಳು.... ದಾಸಿ.... ಎಂದು ಭಾವಿಸಿದ್ದಾರೇನೊ!....

"ಯಾಕೆ ಕೇಳಬಾರದಿತ್ತು ನನ್ನನ್ನು? ಹ್ಞಂ- -ಕೇಳಿದರು, ಏನೆಂದು ಪ್ರೀತಿ, ಕರುಣೆ ಯಾವದನ್ನೂ ತೋರದೆ ಅಧಿಕಾರ ದರ್ಪದಿಂದ....ಏನು ಅಧಿಕಾರ ದರ್ಪ ಅದು!....

"ಮಾರಾಟಕ್ಕೆ ತಂದ ವಸ್ತುವಿಗಿಂತಲೂ ಹೆಂಡತಿ ಕಡೆಯೆ....ಪತಿ ಕೇಳಿದಷ್ಟು ಹಣಕೊಟ್ಟದ್ದೂ ಸಾಲದೆ ಅವನ ಮನೆಯ ಊಳಿಗದಾಳಲ್ಲವೇನು?....

"ಅದಕ್ಕಾಗಿಯೆ ಅಷ್ಟೊಂದು ಅಬ್ಬರಿಸುತ್ತ ಚಹ ಮಾಡಿಕೊಡಲು ಕೇಳಿದರು....

"ಓ, ಖಂಡಿತವಾಗಿ ನಾನು ಈ ದಾಸ್ಯವನ್ನೊಪ್ಪಲಾರೆ.... ಊಳಿಗದಾಳಾಗಿ ಬಿದ್ದುಕೊಂಡಿರಲಾರೆ....ಹೆಂಡತಿ ಎಂದರೆ ಅವಳೂ ಹೃದಯವಿದ್ದ ಜೀವಿ ಎನ್ನುವದನ್ನು ಅವರಿಗೆ ಮನಗಾಣಿಸುತ್ತೇನೆ....

"ಹ್ಞಂ-ಚಹದಂಗಡಿಗೆ ಹೋಗುವ ಹೆದರಿಕೆ ಹಾಕಿದರು ನನಗೆ!

"....ನಾವು ಅಂತಃಕರುಣದಿಂದ, ಪ್ರೀತಿಯಿಂದ ಮಾಡಿಕೊಡುವ ಚಹದ ರುಚಿ ಚಹದಂಗಡಿಯ ಚಹದಲ್ಲಿ ದೊರೆತೀತೆ ?....

"ನಾನು ಎಂದೆಂದಿಗೂ ಸೋಲಲಾರೆ....ನಾನೂ ಮನುಷ್ಯಳು, ಜೀವವಿದ್ದವಳು ಎಂಬುದನ್ನು ಅವರಿಗೆ ತೋರಿಸುತ್ತೇನೆ...."

ಶಾಮಲೆಯ ಹೃದಯದಲ್ಲಿ ವಿಚಿತ್ರ ಸಂಕಟ, ನೋವು. ಚಿಕ್ಕವಳಿದ್ದಾಗಿನಿಂದಲೂ ತಂದೆಯ ಆಘಾತದಿಂದ ಗಂಡಸರ ಕುಲವನ್ನು ಶಪಿಸಲಾರಂಭಿಸಿದ ಅವಳು ಇಂದು ಕೃಷ್ಣನಲ್ಲಿ ಏನು ಕಂಡರೂ ತನ್ನ ದೋಷ

ವನ್ನರಿಯದ ಅನ್ಯರ ದೋಷಗಳನ್ನೆಲ್ಲ ದೊಡ್ಡದು ಮಾಡುವದರಲ್ಲಿಯೆ ಅವಳ ಹೃದಯ ತೂಗಾಡುತ್ತಿತ್ತು.

"ಗಂಡಸರು ದಾರಿಗೆ ಬರಬೇಕಾದರೆ ನಾವು—ಹೆಂಗಸರು—ಹೀಗೆ ಮುಷ್ಕರ ಹಿಡಿಯಲೇಬೇಕು. ಅವರ ಹಿಂಸೆಗಳಿಂದ ಪಾರಾಗಿ ಮಾನವರಾಗಿ ಬಾಳಲೇಬೇಕು"

'ಎಷ್ಟು ದಿವಸ ನಡೆಯುತ್ತದೆಯೋ ಈ ಮುಷ್ಕರ ನೋಡುತ್ತೇನೆ'

ಹೋಟಲಿನಲ್ಲಿ ಚಹ ಕುಡಿದು ಕದಡಿದ ಮನಸ್ಸನ್ನು ಶಾಂತಿಗೊಳಿಸುವದಕ್ಕಾಗಿ "ನಗರವನ"ಕ್ಕೆ ಬಂದ ಕೃಷ್ಣ ಸಿಗಾರ್ ಉರಿಸುತ್ತ ತನ್ನಲ್ಲಿಯೆ ತಾನು ಹೇಳಿಕೊಂಡ. ಅವನ ಮನಸ್ಸು ಇಂದು ಉದ್ವಿಗ್ನವಾಗಿತ್ತು. ಯೋಚನೆಯ ಮೇಲೆ ಯೋಚನೆಗಳು ಬಂದು ಚಿತ್ತ ಚಂಚಲವಾಗಿತ್ತು. ದೃಷ್ಟಿ ಶೂನ್ಯವಾಗಿ ಸಂಧ್ಯಾದೇವಿಯ ನೃತ್ಯದ ವಿವಿಧ ಭಂಗಿಗಳನ್ನವಲೋಕಿಸುತ್ತಿತ್ತು.

"ಈ ಸಂಧ್ಯೆಯ ಹಾಗೆಯೆ ಈ ಬಣ್ಣದ ಒಸಣಗೆಯರು.... ಹೆಣ್ಣು ಲೋಕವೆ ಹಾಗೇನೊ!.. ಇವರ ನೆಲೆ ಯಾರಿಗೂ ನಿಲುಕುವಹಾಗಿಲ್ಲ.... ತಮ್ಮ ಮನಸ್ಸಿನ ವಿರುದ್ಧ ಗಂಡಸರು ಸ್ವಲ್ಪ ವರ್ತಿಸಿದರೂ ಸಾಕು; ಇವರಿಗೆ ಸಹನೆ ತಪ್ಪುತ್ತದೆ....

"ಅಬ್ಬ! ...ಅಮ್ಮನ ಪ್ರತಿಮೂರ್ತಿ ಶಾಮಲೆ ... ಕೋಪವೆಲ್ಲ ಯಾವಾಗಲೂ ಮೂಗಿನ ಮೇಲೆ ಕುಣಿಯುತ್ತಿರುತ್ತದೆ ..

"ನೋಡೋಣವಂತೆ ಎಷ್ಟು ದಿವಸ ನಡೆಯುತ್ತದೆಯೋ ಈ ಆಟ.... ನಡೆಯಲಿ....ನಡೆಯಲಿ...."

ಕೈ-ಕೈ ತಿಕ್ಕಿಕೊಂಡು ಬಾಯಿ ತುಂಬ ಸಿಗಾರಿನ ಹೊಗೆಯನ್ನು ಹೊರಗೆ ತೂರಿದ. ಹೃದಯ ಮಾತ್ರ ತನ್ನ ಹೊಯ್ದಾಟವನ್ನು ಹಾಗೆಯೆ ಮುಂದುವರಿಸಿತ್ತು

"ನಾನೆಂದಿಗೂ ಹೆಂಡತಿಗೆ ಸೊಪ್ಪು ಹಾಕಲಾರೆ.... ಗಂಡಿನ ಸೋಲನ್ನು ತೋರಿಸಲಾರೆ ... ನಾನು ಸ್ವಲ್ಪ ಅವಕಾಶವಿತ್ತರೆ ತಂದೆಯ ಸ್ಥಿತಿ ನನಗೂ ಬಂದೀತು...."

ಏನಾದರೇನು? .... ನಾನು ಮಾತ್ರ ಸೋಲಲಾರೆ ....... ಸೋಲಲಾರೆ....''

ಸಿದ್ಧಾರ್ಥರದ ನುಡಿಯೊಂದನ್ನು ನುಡಿಯಿತು ಒಳಧ್ವನಿ. ಅದರಿಂದ ಒಂದು ಬಗೆಯ ಸಮಾಧಾನವೂ ದೊರೆತ ಹಾಗಾಯಿತೇನೋ! ಅವನ ಮೊಗದಲ್ಲಿದ್ದ ಕಟು ಛಾಯೆ ಮೆಲ್ಲನೆ ಜಾರಲಾರಂಭಿಸಿತು. ಹಾಗೆಯೆ ಅವನು ಅಲ್ಲಿಂದ ಎದ್ದು ನಡೆದ.

ಸಂಧ್ಯೆಯ ಬಾಹ್ಯ ಸೌಂದರ್ಯ ಪ್ರಪಂಚವನ್ನು ತಣಿಸಿ ಮರೆಯಾಗಿತ್ತು. ನಿಬಿಡವಾದ ಕಾರ್ಗತ್ತಲೆ ಪ್ರಪಂಚವನ್ನು ಮುತ್ತಿ ಅಟ್ಟಹಾಸಗೈಯ್ಯುತ್ತಿತ್ತು. ಅವನ ಹೃದಯದಲ್ಲಿ ಕತ್ತಲೆ ತುಂಬಿದ್ದರೂ ಮನದ ಸಿದ್ಧಾರ್ಥರ ಅಲ್ಲೊಂದು, ಇಲ್ಲೊಂದು ಮಿನುಗುವ ಕಿರು ತಾರೆಗಳಂತೆ ಕಿರು ಬೆಳಕನ್ನಿತ್ತಿತು.

ಅವನು ಹಾಗೆಯೆ ಸಾಗಿದ್ದ. ಮನೆಗೆ ಮಾತ್ರ ಹೋಗಲಿಲ್ಲ. ನೇರವಾಗಿ ಹೋಟೆಲಿಗೆ ಹೋಗಿ ಊಟಮಾಡಿಯೆ ಮನೆಯ ಕಡೆಗೆ ನಡೆದ. ಶಾಮಲೆ ಅವನ ಬರವನ್ನೆ ಕಾಯುತ್ತ ಕುಳಿತಿದ್ದಳು. ಕೃಷ್ಣ ತುಟಿ ಎರಡು ಮಾಡದೆ ನೇರವಾಗಿ ತನ್ನ ಮಲಗುವ ಕೊಟಡಿಗೆ ನಡೆದು ಗಾದಿ ಉರುಳಿಸಿ ಅದರ ಮೇಲೆ ಬಿದ್ದುಕೊಂಡ.

‘‘ಅಡಿಗಾಗೇದ’’

ಎಂದು ಸೆಡುವಿನ ಸ್ವರದಲ್ಲಿ ಶಾಮಲೆ ಹೇಳಿದಳು. ಹೊದ್ದುಕೊಂಡ ಮುಸುಕನ್ನೂ ತೆರೆಯದೆ ಕೃಷ್ಣ ಹೇಳಿದ.

‘‘ನನಗೆ ಹಸಿವಿಲ್ಲ’’

ಶಾಮಲೆ ಅವನನ್ನು ಮತ್ತೆ ಕರೆಯಲಿಲ್ಲ. ತಾನೂ ಹಾಸಿಗೆ ಹಾಸಿಕೊಂಡು ಮಲಗಿಬಿಟ್ಟಳು. ರಾತ್ರಿಯೆಲ್ಲ ಅತ್ತು-ಅತ್ತು ಅವಳ ಕಂಗಳು ಊದಿ ಹೋಗಿದ್ದವು. ನಿಟ್ಟುಸಿರ್ಗರೆಯುತ್ತ ಕೃಷ್ಣನೂ ಎಚ್ಚರವಾಗಿಯೆ ಇದ್ದ. ಆದರೆ ಯಾರೊಬ್ಬರೂ ತುಟಿ ಎರಡು ಮಾಡಲಿಲ್ಲ.

ಮಾಡಿದ ಅಡಿಗೆ ತಂಗಳಾಗಿ ಅಡಿಗೆ ಮನೆಯಲ್ಲಿ ಹಾಗೆಯೆ ಇತ್ತು.

೪

ಅಂದಿನಿಂದ ಅವರು ಒಬ್ಬರಿಂದೊಬ್ಬರು ದಿನದಿನಕ್ಕೂ ದೂರದೂರ

ವಾಗುತ್ತಿದ್ದರು. ಒಬ್ಬರೂ ಸೋಲನ್ನೊಪ್ಪದ ಸದ್ಗುಣದ್ವಾರ ಆನೆಯಂತಾಗಿದ್ದರು. ದಿನದ ಕಾರ್ಯಕ್ರಮ, ದಿನಸಾದಿನ ಜೀವನ ಯಂತ್ರದಂತೆಯೆ ಸಾಗುತ್ತಿತ್ತು. ಆದರೆ ಮೊದಲಿನ ಸ್ನೇಹ, ಪ್ರೀತಿ, ಅಂತಃಕರಣ ಮಾತ್ರ ಆ ದಾಂಪತ್ಯಕ್ಕೆ ಎಟುಕದ ಗಗನ ಕುಸುಮವಾಯಿತು. ವಿಚಿತ್ರ ಪರಿಸ್ಥಿತಿಯೊಂದು ಸಂಸಾರದಲ್ಲಿ ಕಾಳ ರಾತ್ರಿಯಂತೆ ಕವಿದು ಬರುತ್ತಿತ್ತು. ಕಾಣದ ಕೈಯೊಂದು ಬೆರಳಿನಂತೆ ಸಂಸಾರದ ಹೃದಯವನ್ನೇ ಚುಚ್ಚುತ್ತಿತ್ತು. ವಿಷ ಚಿಮ್ಮುತ್ತಿತ್ತು. ಮಾತುಗಳಿಲ್ಲದ ಗಾಢವಾದ ಮೌನಗಳೆಷ್ಟೊ ಅವರ ಜೀವನದಲ್ಲಿ ಬಂದುಹೋದವು. ಅನಿವಾರ್ಯವಾಗಿ ಮಾತನಾಡುವ ಸ್ಥಿತಿ ಬಂದರೂ ಎಷ್ಟೊ ಅಷ್ಟೆ. ನೀರಸತೆಯ ಕಾಳಿಂಗ ಅವರ ಸಂಸಾರದಲ್ಲಿ ಹೆಡೆಯಾಡುತ್ತಿತ್ತು. ಬಾಳು ಅಧೋಮುಖಿಯಾಗಿತ್ತು.

ಒಂದೊಂದು ಸಮಯ ಅಲ್ಪ ಮಾತಿಗಾಗಿ ಜಗಳ ಆರಂಭವಾಗುತ್ತಿತ್ತು. ಹತ್ತಿದ ಜಗಳ ಹರಿಯುವದೆ ಕಷ್ಟವಾಗುತ್ತಿತ್ತು. ಮತ್ತೆ ಮಾತಿಲ್ಲದ ಮೌನ ಅವರ ಬಾಳಿನಲ್ಲಿ ತನ್ನ ತಲೆಹಾಕುತ್ತಿತ್ತು.

ಕೃಷ್ಣ—ಶಾಮಲೆಯರು ಒಬ್ಬರನ್ನೊಬ್ಬರು ಹಿಡಿದು ಹೋಗುವ ಸ್ಥಿತಿ ಬಂದೊದಗಿದರೂ ಸಂಸಾರದ ನಿಜ ತಿರುಳನ್ನರಿಯಲೆತ್ನಿಸಲಿಲ್ಲ. ಕೃಷ್ಣ ಅವಳಲ್ಲಿ ತುಂಬ ದೋಷಗಳನ್ನು ಕಂಡರೆ ಶಾಮಲೆ ಅವನ ಎಷ್ಟೋ ಕಾರ್ಯಗಳಲ್ಲಿ ಆಕ್ಷೇಪಣೆಯ ರಾಗವನ್ನು ತನ್ನಲ್ಲಿಯೆ ತಾನು ಹಾಡಿಕೊಳ್ಳುತ್ತಿದ್ದಳು. ತಮ್ಮ ಬಾಳು ಎಲ್ಲಿ ತಪ್ಪುತ್ತಿದೆ, ಎಲ್ಲಿ ಮುಗ್ಗರಿಸುತ್ತಿದೆ ಎಂದು ಒಬ್ಬರೂ ಯೋಚಿಸುತ್ತಿರಲಿಲ್ಲ. ತಮ್ಮ ಹೆಜ್ಜೆ ಎಲ್ಲಿ ತಬ್ಬಿಬ್ಬಾಗುತ್ತಿದೆ ಎಂಬುವದನ್ನರಿಯುವದು ಹೋಗಲಿ. ತಪ್ಪಿದ್ದೂ ತಿದ್ದಿಕೊಳ್ಳದೆ ಒಬ್ಬರೊಬ್ಬರ ಡೊಂಕನ್ನೇ ಹುಡುಕಾಡುವದರಲ್ಲಿ ಜೀವನ ನೂಕುತ್ತಿದ್ದರು. ಕಣ್ಣಿದ್ದೂ ಕುರುಡರಾಗುವ ಸ್ಥಿತಿ ಅವರಿಗೆ ಪ್ರಾಪ್ತವಾಗಿತ್ತು. ಸೋಲಿನಲ್ಲಿ ಗೆಲುವನ್ನು ಕಾಣುವ, ಸಮತೆಯಲ್ಲಿ ಒಲವನ್ನು ಕಾಣುವ ಕೆಳೆತನದ ದಿವ್ಯ ದರ್ಶನವೆ ಅವರಿಗಾಗಲಿಲ್ಲ. ಒಬ್ಬರನ್ನು ಇನ್ನೊಬ್ಬರು ಸೆರೆಯಾಳಾಗಿ ಮಾಡಬೇಕೆನ್ನುವ ಹುಚ್ಚು ಹಂಬಲದಲ್ಲಿ ಒಬ್ಬರನ್ನೊಬ್ಬರು ಅರಿಯುವದೂ ಸಾಧ್ಯವಾಗಲಿಲ್ಲ. ಬಾಳೇ ಒಂದು ಹೊರೆಯಾಗಿ ಅದರ ಭಾರವನ್ನಿಳಿ

ಸಲಾರದೆ ಒಳಗೊಳಗೆಯೇ ಕುದಿಯುತ್ತಿದ್ದರು. ಯಂತ್ರದಂತಹ ಜೀವನ ನಡೆಯಿಸಿದ್ದರು

ಅಂದು ಭಾನುವಾರ. ಆಫೀಸಿಗೆ ರಜೆಯಿತ್ತು. ಕೃಷ್ಣಮುಖ ಕ್ಷೌರ ಮಾಡಿಕೊಳ್ಳುತ್ತ ಮನೆಯಲ್ಲಿಯೇ ಕುಳಿತಿದ್ದ ಮುಂಜಾನೆ. ಬಾಗಿಲಿನ ಕಸ ಗೂಡಿಸುತ್ತ ಶಾಮಲೆ ಕೈಯಲ್ಲಿ ಕಸ ಪೊರಕೆ ಹಿಡಿದುಕೊಂಡು ನಿಂತಿದ್ದಳು. ಅಷ್ಟರಲ್ಲಿ ಅಂಚೆಯವಾಳು ಎರಡು ಕಾಗದಗಳನ್ನು ಮನೆಯಲ್ಲಿ ಎಸೆದು ಹೋದ. ಅಲ್ಲಿಯೆ ನಿಂತಿದ್ದ ಶಾಮಲೆ ಕೈಯಲ್ಲಿಯ ಕಸಪೊರಿಕೆಯನ್ನು ಆಚೆಗೆಸೆದು ಅವುಗಳನ್ನು ಓದಲಾರಂಭಿಸಿದಳು.

ಅವಳು ಓದುವದನ್ನು ಕಂಡು ಅವನಿಗೆ ತುಂಬ ಕೋಪ ಬಂತು.

" ಗಂಡನೆನ್ನುವ ಬೆಲೆಯನ್ನೆ ಕೊಡುವದಿಲ್ಲವಲ್ಲ ಇವಳು ನನಗೆ !.... ನನ್ನನ್ನು ಬಿಟ್ಟು ತಾನು ಓದುತ್ತ ನಿಂತಿದ್ದಾಳೆ "

ಎಂದೆಲ್ಲ ಯೋಚಿಸಿದಾಗ ಕೋಪ ಇನ್ನೂ ಜಾಸ್ತಿಯಾಯಿತು.

" ಇಲ್ಲಿ ತೊಗೊಂಬಾ ಇಲ್ಲಿ ಆ ಪತ್ರಾನ . "

ಕೃಷ್ಣ ಆಜ್ಞೆ ವಿಧಿಸಿದ. ಆಗಲೆ ಅವಳ ಓದು ಮುಗಿದಿತ್ತು. ಮೊಗ ಆ ಕಾಗದಗಳಿಂದ ಪ್ರಸನ್ನವಾಗಿತ್ತು. ಅಂತೆಯೆ ನಗುತ್ತ ಅವಳು ಪತಿಯ ಕೋಪವನ್ನೆಲ್ಲ ಮರೆತು ಆ ಕಾಗದನ್ನು ಅವನಿಗೆ ತಂದು ಕೊಟ್ಟಳು.

ಕಾಗದದಗಳೆರಡನ್ನೂ ಕೃಷ್ಣ ಮನದಲ್ಲಿಯೇ ಓದಿಕೊಂಡ. ಒಂದು ಅವನ ಮಾವನ ಕಾಗದ. ದೀಪಾವಳಿಯ ಹಬ್ಬಕ್ಕೆ ಅಳಿಯತನಕ್ಕಾಗಿ ಬರಲು ಆಹ್ವಾನವಿತ್ತಿದ್ದರು. ಇನ್ನೊಂದು ಕಾಗದ ಅವನ ತಂದೆಯದು. ಅಳಿಯತನಕ್ಕಾಗಿ ಹೋಗಲು ಅವನ ತಾಯಿ ಆಜ್ಞೆ ವಿಧಿಸಿದ್ದರು.

" ಕಾಗದಲ್ಲಿಯೂ ತನ್ನ ಅಧಿಕಾರವನ್ನು ತೋರಿಸಿದ್ದಾಳಲ್ಲ ಅವ್ವ.... ಬರೆಯುವದಕ್ಕೆ ಬರುತ್ತಿದ್ದರೆ ಇನ್ನು ಎಷ್ಟು ತೋರಿ ಸುತ್ತಿದ್ದಳೊ...."

ಎಂದು ನೆನೆದಾಗ ಕೃಷ್ಣನಿಗೆ ನಗು ಬಂತು. ನಕ್ಕು ಬಿಟ್ಟ. ಆ ಕಾಗದಗಳಿಂದ ತನ್ನಂತೆಯೇ ಅವನೂ ಪ್ರಸನ್ನನಾದನೆಂದು ಬಗೆದು ಶಾಮಲೆ ಕೇಳಿದಳು.

“ ಹೋಗ್ಗೋಣ್ವ ? ”

ಶಾಮಲೆಯ “ಹೋಗೋಣ ?” ಎಂಬ ರಾಗದಲ್ಲಿ ಬಾಹ್ಯ ಬಿಗುಪಿದ್ದರೂ ಅಂತರ್ಯದಲ್ಲಿ ಸರಳತೆ ಹುದುಗಿತ್ತು. ಇಲ್ಲಿನ ಸಂಸಾರ, ಜೀವನ ಅವಳಿಗೆ ತುಂಬ ಬೇಸರ ಬರಿಸಿತ್ತು. ನಾಲ್ಕು ದಿನಗಳ ಮಟ್ಟಿಗಾದರೂ ತಾಯ ಮಡಿಲಲ್ಲಿ ತನ್ನ ದುಃಖವನ್ನು ತೋಡಿಕೊಂಡು ಬೇಸರವನ್ನು ಮರೆಯಾಗಿಸಬೇಕೆಂದು, ಮನಸ್ಸಿಗೆ ಒಂದು ಬಗೆಯ ಶಾಂತಿಯನ್ನು ದೊರಕಿಸಿಕೊಳ್ಳಬೇಕೆಂದು ಹಾರೈಸಿಯೆ ಅವಳು ಹಾಗೆ ಕೇಳಿದ್ದಳು.

ಕೃಷ್ಣನಿಗಾದರೂ ಏನು ? ಅದೇ ಹಾಡು ತಾನೆ ? ಈ ಚಂಡಿ ಹೆಣ್ಣಿನ ಜತೆಗೆ ಬೇಸತ್ತ ಅವನಿಗೆ ನಾಲ್ಕು ದಿನಗಳ ಮಟ್ಟಿಗಾದರೂ ನೆಮ್ಮದಿ ದೊರೆತೀತಲ್ಲ ಎಂದು ಸಂತೋಷವಾಯಿತು. ಅಲ್ಲದೆ ಅವಳ ಚಂಡಿತನವನ್ನು ಕಳೆದು ತನ್ನ ದಾರಿಗೆ ತರಲು ಪ್ರಯತ್ನಿಸಬೇಕೆಂಬಾಸೆ. ಅದರಿಂದ ಕೃಷ್ಣ ಸರಳ ಮಾರ್ಗದಿಂದ ಹೇಳಿದ.

“ ನಾಡದ ಹೋಗೇ ಬಿಡೋಣ. ”

ಐದು ತಿಂಗಳು ಕಾಲ ಕಳೆದ ಮೇಲೆ ಪತಿ-ಪತ್ನಿಯರು ಒಮ್ಮತದ ಅಭಿಪ್ರಾಯ ಪಟ್ಟಿದ್ದು ಇದೇ ಮೊದಲು ಸಲ.

ಪಯಣದ ಸರ್ವಸಿದ್ಧತೆಯು ತುಂಬ ಉತ್ಸಾಹದಿಂದ ನಡೆಯಿತು. ಕೃಷ್ಣ ಆಫೀಸಿಗೆ ನಾಲ್ಕು ದಿನ ಹೆಚ್ಚಿಗೆ ರಜೆ ಬರೆದು ಬಿಟ್ಟ. ಅವನಿಗೂ ಬಹಳ ಹುರುಪು ಬಂದ ಹಾಗಿತ್ತು. ನೀಲಾಂಬರ ವರ್ಣದ ರೇಶಿಮೆಯ ಸೀರೆಯೊಂದನ್ನು ತಂದು ಕೊಟ್ಟ ಪತ್ನಿಗೆ.

“ ನರಕ ಚತುರ್ದಶಿ ”ಯ ಹಿಂದಿನ ದಿನ ಶಾಮಲೆಯ ತವರಿಗೆ ಮೋಟಾರ್‌ಮೂಲಕ ಪತಿ-ಪತ್ನಿಯರು ಪಯಣ ಬೆಳಸಿದರು. ಮೋಟಾರಿನ ಮಾರ್ಗಕ್ಕೂ, ಶಾಮಲೆಯ ತವರೂರಿಗೂ, ಮಧ್ಯ ಎರಡು-ಮೂರು ಮೈಲಿನ ಅಡ್ಡದಾರಿಯಿತ್ತು. ಅಳಿಯನಿಗೆ ತೊಂದರೆಯಾಗಬಾರದೆಂದು ರಾಯರು ಮೋಟಾರು ನಿಲ್ದಾಣಕ್ಕೆ ತಮ್ಮ ಬಂಡಿ ಹೂಡಿಸಿಕೊಂಡು ಬಂದಿದ್ದರು. ಮೋಟಾರಿನಿಂದಿಳಿದೊಡನೆ ಆ ಮಾವನನ್ನು ಕಂಡು ಕೃಷ್ಣನಿಗೆ ಸಂತೋಷವಾಯಿತು. ಅವರಿಗೆ

ಅಳಿಯ, ಮಗಳು ಇಬ್ಬರೂ ವಂದಿಸಿದರು. ಅವರನ್ನಾಶೀರ್ವದಿಸಿ ಚಕ್ಕಡಿಯಲ್ಲಿ ಕುಳ್ಳಿರಿಸಿಕೊಂಡು ಊರಿಗೆ ಕರೆದುಕೊಂಡು ನಡೆದರು.

ಶಾಮಲೆ ತಾಯಿಯನ್ನು ಕಂಡು ತನ್ನ ಮುಖವನ್ನೊತ್ತಿ ಕೊಂಡಿಕೊಂಡು "ಗೋಳೋ" ಎಂದು ಅತ್ತಳು. ಸಾವಿತ್ರಿಬಾಯಿಯವರು ಅವಳನ್ನು ಸಂತೈಸಿ ತಾವೂ ನಾಲ್ಕು ಕಂಬನಿಗಳನ್ನು ಸುರಿಸಿದರು.

ಆ ದಿನವೆಲ್ಲ ಹಾಗೆಯೆ ಕಳೆಯಿತು. ಮರು ದಿನವೆ ನರಕ ಚತುರ್ದಶಿ. ಅಂದು ಬೆಳಗುಜಾವ ಅಳಿಯದೇವರಾದ ಕೃಷ್ಣನಿಗೆ ಪತ್ನಿ ಶಾಮಲೆ, ಅತ್ತೆ ಸಾವಿತ್ರಿಬಾಯಿಯವರು ಆರತಿ ಬೆಳಗಿದರು. ಆರತಿಯಲ್ಲಿ ಅಳಿಯ ದೇವರು ಹತ್ತು ರೂಪಾಯಿಗಳನ್ನು ಹಾಕಿದರು. ಪುರಾಣ ಯುಗದ ಕೃಷ್ಣನಿಗೆ ವಿಜಯವಾದ ಹಾಗೆಯೆ ಆಧುನಿಕ ಕೃಷ್ಣನಿಗೆ ಬಾಳಿನಲ್ಲಿ ವಿಜಯ ದೊರೆಯದಿದ್ದರೂ ಸಾಂಪ್ರದಾಯದ ಪ್ರತೀಕವಾಗಿ ಕುಂಕುಮದ ಬೊಟ್ಟನ್ನು ಹಣೆಗಿಟ್ಟರು ಅವನ ಅತ್ತೆ.

ಮಧ್ಯಾಹ್ನ ಹಬ್ಬದೂಟವಾಯಿತು. ರಾತ್ರಿ ಪಗಡೆಯಾಟಕ್ಕಾಗಿ ಕೃಷ್ಣನಿಗೆ ಕರೆಬಂತು ಅತ್ತೆಯವರಿಂದ.

"ಹೇ–ಪಗಡಿ ಏನ ಆಡೂದು."

ಎಂದು ರಾಗ ಎಳೆದ ಕೃಷ್ಣ. ಸಾವಿತ್ರಿಬಾಯಿಯವರು ನಗುತ್ತ ಹೇಳಿದರು.

"ದೀಪಾವಳ್ಯಾಗ ಪಗಡಿ ಆಡಲಿಲ್ಲಂದ್ರ ಕತ್ತೀಜನ್ಮ ಬರತ್ಪದಂತ ಗೊತ್ತಿಲ್ಲೇನು ನಿಮಗ ?"

ರಾಯರೂ ಅವನನ್ನು ಕರೆದರು. ನಿರ್ವಾಹವಿಲ್ಲದೆ ಕೃಷ್ಣ ಆಡುವುದಕ್ಕೆ ಕುಳಿತ....ಸಾವಿತ್ರಿಬಾಯಿಯವರು ಶಾಮಲೆ ಒಂದಾಗಿ ಆನೆ–ಅಕಳುಗಳನ್ನು ತೆಗೆದುಕೊಂಡು ಕುಳಿತರೆ, ರಾಯರು ಕೃಷ್ಣ ಕುದುರೆ ಕತ್ತೆಗಳ ಜೋಡಿಯನ್ನು ತೆಗೆದುಕೊಂಡು ಕುಳಿತರು. ಮೂರು ಆಟಗಳಲ್ಲೂ ಗಂಡಸರಿಗೇ ಸೋಲು. ಕೃಷ್ಣ ಅದನ್ನು ಮನಸ್ಸಿಗೆ ಹಚ್ಚಿ ಕೊಳ್ಳುದಿದ್ದುದೇ ಹೆಚ್ಚು. ಶಾಮಲೆ ಗೆದ್ದೆನೆಂಬ ಅಹಂಕಾರದಿಂದ ಮಾತ್ರ ಬೀಗಿದಳು; ಬಾಳ ನಾಟಕದಲ್ಲಲ್ಲದಿದ್ದರೂ ಪಗಡೆಯ ಆಟದಲ್ಲಿ.

ಕೃಷ್ಣನಿಗೆ ಮುಂದೆ ಎರಡು ದಿನಗಳನ್ನು ಸುಮ್ಮನೆ ಕುಳಿತು ಕಳೆಯುವುದು ತುಂಬ ಬೇಸರ ಬಂದಿತು. ಭಾವಬಿದಿಗೆಯ ದಿನ ನಸುಕಿನಲ್ಲಿ ಎದ್ದೊಡನೆಯೆ ಶಾಮಲೆಗೆ ಹೇಳಿದ.

"ನಿಮ್ಮ ತ್ವಾಟಕ್ಕ ಹೋಗಿ ಬರೂಣ ಬಾ. ಭಾಳ ಬ್ಯಾಸರಕಿ ಬಂದ್ನದ."

ನಗರದಲ್ಲಿ ಪತಿ ಪತ್ನಿಯರಿಬ್ಬರೂ ವಾಕಿಂಗಕ್ಕೆ ಹೋಗುವದನ್ನು ಕಂಡಿದ್ದಳು ಶಾಮಲೆ. ತನ್ನ ಗಂಡ ತನ್ನನ್ನೂ ಹಾಗೆ ಕರೆದುಕೊಂಡು ಹೋಗಬಹುದೆಂದು ಆಸೆಪಟ್ಟಿದ್ದಳು. ಆದರೆ ದಿನದಿನಕ್ಕೂ ಬೆಳೆದು ಬರುತ್ತಿರುವ ವಿರಸತೆ ಅವರೀರ್ವರ ಹಲವು ಎಳೆವರೆಯದ ಮುಗ್ಧ ಪ್ರಣಯದ ಆಸೆಗಳನ್ನೆಲ್ಲ ಹೋಮ ಮಾಡಿತ್ತು. ಪತಿಯ ಒಲವಿನ ಮಾತಿನಿಂದ ಇಂದು ಅವಳಿಗೆ ಸಂತೋಷವಾಯಿತು. ಕೃಷ್ಣನ ಜತೆಗೆ ಅವಳು ತಕ್ಷಣ ಹೊರಡಲು ಸನ್ನದ್ಧಳಾದಳು. ಚಹ ಕುಡಿದು ಇಬ್ಬರೂ ಹೊರಗೆ ಬಂದರು. ತೋಟವನ್ನು ತಲುಪಿದಾಗ ಮನಸ್ಸಿಗೆ ಹೊಸ ಹುರುಪು ಬಂದಿತು.

ಸೂರ್ಯನ ಎಳೆಯ ಕಿರಣಗಳು ಬೀಸುತ್ತಿದ್ದ ಮಂದಾನಿಲ ಕಣ್ಣು ಕೋರೈಸುವ, ಮನ ಕುಣಿಸುವ ತೋಟದ ತೆಂಗು—ಕಬ್ಬು—ಬಾಳೆ, ಪ್ರತಿಯೊಂದರಲ್ಲೂ ನಿಸರ್ಗ ತನ್ನ ಹೊಸತನವನ್ನು, ;ತನ್ನ ಸಂದೇಶವನ್ನು ಪ್ರಪಂಚಕ್ಕೆ ನೀಡುತ್ತಿತು.

" ಅಂತಹ ಬೆಳಕು, ಅಂತಹ ಹೊಸತನ ತಮ್ಮ ಬಾಳಿಗೆ ಬಂದೀತೆ? ....ಆ ಕಾಲ ದೂರವಿಲ್ಲವೆ ?...."

ಎಂದು ಯೋಚಿಸುತ್ತಲಿ ಶಾಮಲೆ- ಕೃಷ್ಣ ತೋಟವನ್ನೆಲ್ಲ ಒಂದು ಸಲ ಬಳಸಿಕೊಂಡು ಬಂದರು. ಅಲ್ಲಿ ಬಾವಿಯ ದಂಡೆಯಮೇಲೆ ಕುಳಿತ ಒಕ್ಕಲಿಗ ದಂಪತಿಗಳನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಮೃದುವಾದ ಹುಲ್ಲಿನ ಮೇಲೆ ಹಾಯಾಗಿ ಕುಳಿತು ಹರಟುತ್ತ ರೊಟ್ಟಿತಿನ್ನುತ್ತಿದ್ದರು ಆ ದಂಪತಿಗಳು. ಕೊನೆಗೆ ಉಳಿದುದು ಅರ್ಧ ರೊಟ್ಟಿ.

" ಅದ್ನ ನೀನು ತ್ಗೊಂಡ ಬಿಡು, ನನ್ನ ಹೊಟ್ಟಿ ತುಂಬ್ತು."

" ತಗೊಬಾರ್ದ್ಪ ನಿನಃ "

ಎಂದು ಒಕ್ಕಲಿಗನ ಪತ್ನಿ ಅದನ್ನೆತ್ತಿ ಅವನ ಕೈಮೇಲೆ ಇಡಲು ಹೋದಳು.

" ನಾ ಒಲ್ಲೆ ನಿನಽ ತಿನ್ನಗಡಾ. ದಗದಕ ಹೊತ್ತಾತೈತಿ. "

ಇಬ್ಬರಲ್ಲಿಯೂ ಪ್ರಣಯಕಲಹ ನಡೆಯಿತು. ಅವನಿಗೋಸ್ಕರ ಅವಳು ಎಲ್ಲವನ್ನೂ ಬಿಡಲು ಸಿದ್ಧಳು. ಅವಳಿಗೋಸ್ಕರ ಅವನು ಯಾವ ತ್ಯಾಗಕ್ಕೂ ಹಿಂದು ಮುಂದೆ ನೋಡಲಾರ ಎನ್ನುವಂತಿತ್ತು ಆ ದೃಶ್ಯ.

" ಇಕಾ ಹಿಂಗ ಮಾಡು. ನನಗ ಅಽಟ ಕೊಡು. ನೀ ಅಽಟ ತಿನ್ನು ತತಽ. "

ಎಂದು ಕೊನೆಗೆ ಪತ್ನಿಗೆ ಹೇಳಿದ ಒಕ್ಕಲಿಗ. ಪತ್ನಿ ಅರ್ಧದಲ್ಲಿ ಎರಡ್ ಸಮಪಾಲು ಮಾಡಿ ಅವನಿಗೊಂದು ಕೊಟ್ಟು ತಾನೊಂದನ್ನು ತಿಂದು ಬುತ್ತಿಯ ಗಂಟನ್ನು ಹಸನ ಮಾಡಿದಳು. ಇಬ್ಬರೂ ಹೊಟ್ಟೆತುಂಬ ಬಾವಿಯಲ್ಲಿ ನೀರುಕುಡಿದು ಮೇಲಕ್ಕೆ ಬರುವಾಗ ಸ್ವಲ್ಪದೂರದಲ್ಲಿ ನಿಂತ ಶಾಮಲೆ– ಕೃಷ್ಣರನ್ನು ನೋಡಿ,

" ಅಯ್ಯ, ಶಾಮಲಕ್ಕಾ ಬಂದಾಳಲ್ಲ ಏಟ ದವಡ !........ "

ಎಂದು ಮೇಲಕ್ಕೆ ನೆಗೆದು ಅವರ ಬಳಿ ಸಾರಿದಳು. ಗಂಡನೂ ಅವಳನ್ನು ಹಿಂಬಾಲಿಸಿ ಬಂದ.

" ಏಟೋತ್ತಾತ ಬಂದಯವ್ವಾ "

ಎಂದು ನಗನಗುತ್ತ ಶಾಮಲೆಯನ್ನು ಕೇಳಿದಳು.

" ಈಗ ಬಂದೀವಿ, ತ್ವಾಟಾ ನೋಡಿಕೊಂಡ ಇತ್ತಲಾಗಽ ನಿಂಗವ್ವಽ '

ಶಾಮಲೆ, ನಿಂಗವ್ವ ಇನ್ನೂ ಮಾತನಾಡುತ್ತ ಇರುವಾಗ ನಿಂಗವ್ವನ ಗಂಡ ಒಂದು ಗೊಂಗಡಿ ತಂದು ಬಾವಿಯ ಕಟ್ಟೆಯ ಮೇಲೆ ಹಾಸಿದ.– –

" ಕುಂದ್ರ ಬರ್ರಿ ಯವ್ವಾವ್ರು– "

ಎಂದು ಕರೆದ.

" ಕೂನಾಽ ನಿಂಗವ್ವಽ "

ಎಂದು ಗಂಡನನ್ನು ನೋಡಿದಳು ಶಾಮಲೆ. ಕೃಷ್ಣ ಬರಲು ಇಷ್ಟಕ್ಕೆ ಸಾಗಿದ್ದ. ಆ ದಾಂಪತ್ಯವನ್ನು ಕಂಡು ಅವನ ಮನಸ್ಸು ಹರುಷ ಪುಲಕಿತ ವಾಗಿತ್ತು.

"ಎಂತಹ ದಾಂಪತ್ಯ ಅವರದು!....ಎಷ್ಟು ಸುಖವಾಗಿದ್ದಾರೆ ...."

ಎಂದು ನೆನೆಯುತ್ತ ಪತ್ನಿಯನ್ನು ಕರೆದುಕೊಂಡು ಆ ಗೊಂಗಡಿಯ ಮೇಲೆ ಕುಳಿತುಕೊಂಡ.

"ಗೊಂಗಡಿಮ್ಯಾಗ ಕುಂಡ್ರಿಸಿದ್ಕ ಕ್ಷ್ಯಮಾ ಮಾಡ್ರಿ."

ಎಂದು ನಿಂಗಪ್ಪ ಕ್ಷಮೆ ಕೋರಿದ.

"ಛೇ, ಅದೇನ ಬಿಡು. ನಾವೂ ಹಳ್ಳ್ಯಾಗ ಹುಟ್ಟಿದವರು."

ಎಂದು ಉಪಚಾರದ ಮಾತನ್ನಾಡಿದ ಕೃಷ್ಣ. ಅಷ್ಟರಲ್ಲಿಯೇ ನಿಂಗವ್ವ ಪತಿಗೆ ಹೇಳಿದಳು.

"ಅಟ ಎಳೆನೀರ ತತಾ."

ಪತ್ನಿಯ ಮಾತನ್ನು ಶಿರಸಾವಹಿಸಿ ನಿಂಗಪ್ಪ ನಡೆದ. ನಿಂಗವ್ವ ಮತ್ತೆ ಅವನನ್ನೆಚ್ಚರಿಸಿದಳು ಅಂತಃಕರುಣದಿಂದ.

"ಗಿಡಾ ಆಟ ನೋಡಿಕೊಂಡಕ್ಯಾಸ ಹತ್ತು. ಎಲ್ಲ್ಯಾರ ಬಿದ್ದಗಿದ್ದಿ...."

"ಅದಕೇನಾಕೈತೇಳಬಾರದ್ಹ. ನಿಂದೊಳ ಹೆಚ್ಚಿಂದು."

ಎಂದು ನಗುತ್ತ ಪತ್ನಿಯನ್ನು ಪ್ರೇಮದಿಂದ ನೋಡುತ್ತ ನಡೆದ. ಅವನು ಅರ್ಧ ಗಿಡವನ್ನು ಏರಿದ್ದನೊ ಇಲ್ಲವೊ, ಅವನನ್ನೆ ನೋಡುತ್ತ ಕುಳಿತ ನಿಂಗವ್ವ ಗಿಡದೆಡೆಗೆ ನಡೆದಳು. ಅವನು ಕಳಗಿಳಿದು ಬರುವ ವರೆಗೂ, ಅವಳು ಅಲ್ಲಿಯೆ ನಿಂತಿದ್ದಳು. ಎರಡು ಎಳೆಗಾಯಿಗಳನ್ನು ಕೆಳಕ್ಕೆ ಒಗೆದ ಹರಿದು. ಜೀವದಲ್ಲಿ ಜೀವವಿಲ್ಲದೆ ಅವನು ಗಿಡ ಏರಿ-ಇಳಿಯುವ ವರೆಗೂ ನೋಡುತ್ತ ನಿಂತ ನಿಂಗವ್ವನಿಗೆ ಜೀವ ಬಂದ ಹಾಗಾಯಿತೇನೊ! ಆ ಎಳೆಗಾಯಿಗಳನ್ನು ಎತ್ತಿ ಕೊಂಡು ಗಂಡನ ಜತೆಗೆ ಮರಳಿದಳು.

"ಎಂತಹ ದಾಂಪತ್ಯ ಪ್ರೇಮ;–ಅಂತಃಕರುಣ!"

ತಮ್ಮಲ್ಲಿಯೆ ತಾವು ಹೇಳಿಕೊಂಡರು ಕೃಷ್ಣ–ಶಾಮಲೆ,

ಸಿಂಗಪ್ಪ ಎಣಗಾಯಿಯನ್ನು ಸುರಿದು ಅವರಿಗೆ ಕೊಟ್ಟ. ಅವರು ನೀರು ಕುಡಿದು, ಎರಡು ಕೆಂಪರಿ ತಿನ್ನುತ್ತಿರುವಾಗ ಸಿಂಗಪ್ಪ ಸಿಂಗವ್ವ ಎಲೆ ಅಡಿಕೆ, ತಂಬಾಕು ಹಾಕಿಕೊಂಡರು. ಅವರಿಂದ ನಿರೂಪ ಪಡೆದು ಮನೆಗೆ ನಡೆದರು ಕೃಷ್ಣ–ಶಾಮಲ.

ದಾರಿಯುದ್ದಕ್ಕೂ ಆ ರೈತ ದಂಪತಿಗಳ ಚೆಲುವಾದ ದಾಂಪತ್ಯದ ಚಿತ್ರ ಕೃಷ್ಣ ಶಾಮಲೆಯರ ಚಿತ್ತದ ಕಣ್ಣುಗಳೆದುರು ಸುಳಿಯುತ್ತಿತ್ತು. ಇಂತಹ ದಾಂಪತ್ಯಗಳನ್ನು ಅವರು ಹಳ್ಳಿಯಲ್ಲಿ ಕಂಡಿಲ್ಲವೆಂತಲ್ಲ. ಅಷ್ಟು ಲಕ್ಷ್ಯವಿಟ್ಟು ನೋಡಿರಲಿಲ್ಲ. ನಿರವತೆಯ ಕಾವು ಆಗ ಹುಟ್ಟಿರಲೂ ಇಲ್ಲ.

“ನಮ್ಮ ದಾಂಪತ್ಯವೂ ಹಾಗಾದೀತೆ ? ” – ನಮ್ಮ ಬಾಳಿಗೂ ಅಂತಹ ಸುಖ ದೊರೆತೀತೆ? .

“ಎಂತಹ ಸರಸ ಅವರದು! ಎಂತಹ ಅಂತಃಕರಣ ಪ್ರೀತಿಗಳ ಪೂರ್ಣಮಂತ ಸ್ವರೂಪ ಅವರ ದಾಂಪತ್ಯ!

“ಬಾಳು ಸುಖದ ಸಾಮ್ರಾಜ್ಯವಾಗಬೇಕಾದರೆ ಸಮತೆ ಬೇಕು. ಒಬ್ಬರಿಗಾಗಿ ಇನ್ನೊಬ್ಬರು ತ್ಯಾಗಕ್ಕೆ ಅಣಿಯಾಗಬೇಕು. ಆಗ ಪ್ರೇಮ ಬೆಳಗೀತು. ಸುಖ ದೊರತೀತು. ಅದಲ್ಲದ ಸುಖಬಯಸುವದು ಬಿಸಿಲು ಗುದುರೆಯ ಬೆನ್ನು ಹತ್ತಿದಂತೆ. ಪ್ರೇಮ, ಒಲವುಗಳಿಂದ ಸುಖದ ಸಾಮ್ರಾಜ್ಯವನ್ನು ಗೆಲ್ಲಬಲ್ಲವರು ಬಾಳಿನ ಅಳವನ್ನರಿಯಬಹುದು

“ಒಬ್ಬರನ್ನು ಇನ್ನೊಬ್ಬರು ಸರಿಯಾಗಿ ನೋಡಿ ಜೀವಿಸಬೇಕನ್ನುವುದು ಹುಚ್ಚುತನ. ಅದರಿಂದಲೆ ನಮ್ಮ ಬಾಳು ಈ ಸ್ಥಿತಿಗೆ ಬಂದಿತಲ್ಲವ ? ಸಿಂಗಪ್ಪ, ಸಿಂಗವ್ವರಲ್ಲಿ ಪ್ರೇಮವಿತ್ತು, ಸ್ವಾತಂತ್ರ್ಯವಿತ್ತು ಪ್ರೀತಿಯಾಗಿ ನಡೆಯುತ್ತಾರೆ. ಹಾಗೆ ನಮ್ಮ ಬಾಳು ಆದೀತ ? ”

ಕೃಷ್ಣ-ಶಾಮಲೆಯರು ಒಬ್ಬರನ್ನೊಬ್ಬರು ತಮ್ಮನ್ನ ತಾವು ನೋಡಿಕೊಂಡರು. ಇಬ್ಬರ ಹೃದಯಗಳಲ್ಲಿಯೂ ಒಂದೇ ಬಗೆಯ ಧ್ವನಿ, ಒಂದೇ ಬಗೆಯ ವಿಚಾರ ಹೊರಹೊಮ್ಮುತ್ತಿತ್ತು. ವಿಚಾರಕ್ಕೆ ವಿವೇಕವೂ ನೆರಳಾಗಿತ್ತು. ಅರ್ಧ ರೊಟ್ಟಿಯಲ್ಲಿಯೆ ಸಮಪಾಲುಮಾಡಿಕೊಂಡು ತಿಂದ ಸಿಂಗಪ್ಪ, ಸಿಂಗವ್ವರ ಒಲವಿನ ಅಮೃತಜೀವನ ಅವ

ರಿಗೆ ಪಾಠ ಕಲಿಸಿತ್ತು. ಅಂತಹ ಜೀವನ ತಮಗೂ ದೊರೆಯಬೇಕೆಂದು ಹೃದಯ ಹಾರೈಸುತ್ತಿತ್ತು. ಮುಚ್ಚಿದ ಕಣ್ಣು ತೆರೆದಿತ್ತು. ಕವಿದ ಪರೆ ಕಳಚಿತ್ತು.

ಅಂತಹ ನಿಜವಾದ ದಾಂಪತ್ಯದ ಸ್ವರ್ಗಸುಖವನ್ನು, ಪ್ರೇಮ—ಒಲವು-ಚಲವುಗಳನ್ನು ಇಬ್ಬರೂ ಬಯಸುತ್ತಿದ್ದರು. ಒಬ್ಬರನ್ನು ಇನ್ನೊಬ್ಬರು ಸೆರೆಯಾಳಾಗಿ ಮಾಡಬೇಕೆಂಬ ಹುಚ್ಚುತನ ಅಳಿದು ಒಲವಿನಮೃತ ಪಾನಕ್ಕಾಗಿ ತಿರುಗಿದ್ದರು.

ಮನೆ ಬಂದಿತು. ಕೃಷ್ಣ ತನಗಾಗಿ ಕಾದಿಟ್ಟ ಕೋಣೆಗೆ ಹೋಗಿ ಕುಳಿತುಕೊಂಡ. ಶಾಮಲೆ ತಾಯಿಯ ಆಣತಿಯಂತೆ ಫಲಹಾರದ ತಬಕವನ್ನೆತ್ತಿಕೊಂಡು ಬಂದು ಅವನ ಮುಂದಿಟ್ಟಳು:

“ಬಾ, ನೀನೂ ಕೂಡ್ರು. ಇಬ್ರು ಇದನ್ನ ತಿನ್ನೋಣು.”

ಪತ್ನಿಯನ್ನ ನಗುನಗುತ್ತ ಕರೆದು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡ ಕೃಷ್ಣ. ಶಾಮಲೆ ಹಿಂದು ಮುಂದು ನೋಡದೆ ಕುಳಿತಳು.

“ಹ್ಞಾಂ ಮತ್ತ ಸುರು ಮಾಡು.”

“ಮೊದಲ ದೇವರ ನೇವಿದ್ಯ ಆಗಲಿ”

“ಇಲ್ಲ, ದೇವಿದಾಗಲಿ.”

ಇಬ್ಬರಲ್ಲಿಯೂ ಒಂದೈದು ನಿಮಿಷ ಹೀಗೆಯೇ “ಚಕಮಕಿ” ನಡೆಯಿತು. ಕೊನೆಗೆ ಇಬ್ಬರೂ ಒಂದೇ ಕಾಲಕ್ಕೆ ಒಪ್ಪಂದದಿಂದ ನೈವೇದ್ಯಕ್ಕೆ ಕುಳಿತರು.

“ಅಲ್ಲಃ ಈಗಾರ ನಿಮಗ ಬುದ್ಧಿ ಬಂತಃ.”

ತನ್ನ ಚಲುವಾದ ಕಣ್ಣಿನ ನೋಟವನ್ನು ಅವನೆಡೆಗೆ ತೂರುತ್ತ ಕೇಳಿದಳು ಶಾಮಲೆ. ಉಂಡಿಯನ್ನು ಮುಗಿಸಿ ಗಿಲಗಂಚಿಯನ್ನು ಬಾಯಿಗಿಟ್ಟುಕೊಳ್ಳುತ್ತಿರುವ ಕೃಷ್ಣ ನಗುತ್ತ ಹೇಳಿದ.

“ನಿನಗ ಬುದ್ಧಿಬರಲೆಂತ ದೇವರ್ನ ಬೇಡತೀನಿ. ನಮ್ಮ ಕುಲದೇವರು ಬನಶಂಕ್ರಿಗೆ ಬೇಕಾರ ಹತ್ತು ರೂಪಾಯಿ ಮುಡಪು ತಗದಿಡತೀನಿ ನಿನಗ ಛಲೋ ಬುದ್ಧಿ ಕೊಟ್ಟರ!”

"ಅಹಾ! ಭಾಳ ಹಂಗs ಹೇಳೂ ಹಂಗಿಲ್ಲ ನಿಮ್ಮ ದೇವರ ಮ್ಯಾಲಿನ ಭಕ್ತೀನ...."

"ದೇವರ ಮ್ಯಾಲಿನ ಭಕ್ತಿಕಿಂತ ಇನ್ನ ಮ್ಯಾಲೆ ದೇವಿಮ್ಯಾಲೆ ಭಕ್ತಿ ಜೋರಾಗತೈತಿ."

ಕೃಷ್ಣ ತನ್ನ ಹೃದಯದ ಹಸನಾದ ಚಿತ್ರವನ್ನು ಅವಳಿಗೆ ತೋರಿದ.

" ನೀನs ದೇವತೆ– ನಾನs ಪೂಜಾರಿ– ನಮ್ಮ ಸಂಸಾರಾನs ಒಂದ ಗುಡಿ ಇರತಿರಲಿಕ್ಕೆ ಹೊರಗಿನ ದೇವರ್ಯಾಕs? "

" ನನ್ನ ಭಾಗಕ್ಕ ನೀವs ದೇವರು ಹೌದು "

ಹೃದಯ ತುಂಬಿ ಹೇಳಿದಳು ಶಾಮಲೆ. ಅಷ್ಟರಲ್ಲಿ ಶಾಮಲೆಯ ತಾಯಿ ಚಹ ತಂದಿಟ್ಟು ಹೋದರು. ಕೃಷ್ಣ ಮಾತ್ರ ಉತ್ಸಾಹಭರಿತನಾಗಿ ಹೇಳುತ್ತಿದ್ದ.

" ಇಂಥಾ ದೀಪಾವಳಿ ಜೀವನದಾಗ ಕಡೆತನಕಾನೂ ಇರಬೇಕು ನೋಡು. ಇವತ್ತಿನಿಂದs ನಮ್ಮ ಸಂಸಾರ ಆರಂಭ ಆತು ಅಂತ ತಿಳಿಯೋಣ. ಹೆಳೇದಾದದ್ದನ್ನ ಮರತ ಬಿಡೂಣ, ಪ್ರೇಮದಿಂದ, ಅಂತಃಕರುಣದಿಂದ ಹೊಸಾ ಜೀವನಕ್ಕ ಕಾಲಿಡೋಣ.... "

ಸಂತೃಪ್ತಿಯ ಸಿರಿನಗೆ ಶಾಮಲೆಯ ತುಟಿಗಳಲ್ಲಿ ಅರಳಿತು. ಅವಳೆದೆ ಅವನೆದೆಗೆ ಒರಗಿತ್ತು. ತುಟಿ ತುಟಿಗಳು ಒಂದಾಗಿ, ಕಣ್ಣು ಕಣ್ಣನ್ನು ಬಳಸಿದ್ದವು.

ಕವಿದ ಕತ್ತಲೆ ಕಳೆದು ತಿಳುವಿನ ಬೆಳಕು ಮೂಡಿತ್ತು. ಹೊಸಭಾವನೆ, ಹೊಸ ಜೀವನ, ಹೊಸ ಜ್ಯೋತ್ಸ್ನೆ ಅಲ್ಲಿ ನೆಲೆ ನಿಂತಿತ್ತು.

" ಚಹಾ ಆರಿ ಹೋಗತೈತಿ "

ಶಾಮಲೆ ಎಚ್ಚರಿಸಿದಳು ಪತಿಯನ್ನು. ಆತ್ಮದ ಅನಂತ ಬೆಳಕಿನಲ್ಲಿ ಒಂದಾಗಿ, ಅಂತಃಕರುಣದ ಅನಂತಾನಂತ ಶಕ್ತಿಯಲ್ಲಿ ಬಂಧಿತರಾಗಿ ಚಹ ಕುಡಿದರು.

ಸಮತೆಯ ಬೆಳಕು, ಮಮತೆಯ, ಬೆಳಕು, ಅಂತಃಕರುಣದ ಬೆಳಕು, ಒಲವಿನೊಂದಿಗೆ ತುಳುಕಾಡುತ್ತ ಅವರು ಕುಳಿತ ಕೊಟಡಿಯನ್ನು ಬೆಳಗಿಸಿ ಮನವನ್ನು ಹೊಕ್ಕಿತ್ತು. ಭವ್ಯ ಸಂಸ್ಕಾರವನ್ನಿತ್ತಿತ್ತು.

———o———

# ಅರೆಯಾಳು

“ ರಸವೆ ಜನನ,
ವಿರಸ ಮರಣ,
ಸಮರಸವೇ ಜೀವನ ”

‘ಶ್ರೀ. ಅಂಬಿಕಾತನಯದತ್ತರು’

# ಅರೆಯಾಳು

## ಬರಿಗೋಳು

### ೧

ಗೆಳೆಯ ರಾಘು, ೨೦-೩-೫೫

ನಿನ್ನ ಪತ್ರ ಮುಟ್ಟಿತು. ಮೇಲಿಂದ ಮೇಲೆ ಪತ್ರ ಬರೆ ಎಂದಿದ್ದೀ. ವಾರಕ್ಕೆರಡು ಸಾರೆಯಾದರೂ ಆತ್ಮೀಯ ಪತ್ರಗಳು ಹೃದಯಗಳ ಸಂದೇಶವನ್ನು ಒಬ್ಬರಿಂದೊಬ್ಬರಿಗೆ ಒಯ್ದು ಮುಟ್ಟಿಸಲಿ. ನಿನ್ನಂತಹ ಸ್ನೇಹಿತ ನನ್ನಗಲಿ ಇರಬೇಕಾದ ಈ ಸಮಯದಲ್ಲಿ ನಿನ್ನ ಬಾಳಿನ ಏಳು-ಬೀಳುಗಳನ್ನು ಅಳಲು ಆ ಮೋದಗಳನ್ನು ಪ್ರತಿನಿತ್ಯವೂ ನಿನಗೆ ವಾಯರ್‌ಲೆಸ್ಸಿನ ಮುಖಾಂತರ ತಿಳುಹಿಸುವ ಅನುಕೂಲತೆ ಇದ್ದರೆ? ಎಂದು ನಾನು ಯೋಚಿಸುತ್ತಲಿದ್ದೇನೆ. ಆಗ ನಾವಿಬ್ಬರೂ ಮೊದಲಿನಹಾಗೆ ಸುಖ—ದುಃಖದ, ಪ್ರೀತಿ—ಸ್ನೇಹಗಳ ವಿಚಾರವಾಗಿ ಹರಟೆ ಹೊಡೆಯಬಹುದಿತ್ತಲ್ಲವೆ. ? ಆದರೆ ಅದೆಲ್ಲಾ ಕನಸು ನೋಡು. ವಿಜ್ಞಾನ ಭಾರತದ ನಗರಗಳಿಗೇ ಸರಿಯಾಗಿ ಪರಿಚಯವಾಗದಿದ್ದಾಗ ನಿನ್ನ ಕೊಂಪೆಯಂತಹ ಹಳ್ಳಿಗಳಿಗೆ ಅದರ ಹೆಸರೂ ಕೇಳಿ ಬರಲಾರದು.

ಹೋಗಲಿ. ಇದ್ದುದರಲ್ಲೇ ತೃಪ್ತಿಪಟ್ಟುಕೊಳ್ಳೋಣ ವಾರಕ್ಕೆರಡು ಸಲವಾದರೂ ನೀನು ಬರೆಯುತ್ತಿರು. ನಾನೂ ಬರೆಯತ್ತಿರುತ್ತೇನೆ. ಪ್ರತಿ ದಿನವೂ ಓಲೆ-ಮಾರೋಲೆಗಳಿಗಾಗಿ ದಾರಿ ಕಾಯುವದು ನನ್ನ ಹಳ್ಳಿಯಲ್ಲಿ ಸಾಧ್ಯವಿಲ್ಲ. ವಾರಕ್ಕೆರೆಡು ಸಲ ಮಾತ್ರ ಇಲ್ಲಿಗೆ ಟಪಾಲು ಬರುತ್ತದೆ. ಇಲ್ಲಿಂದ ಟಪಾಲು ಹೋಗುತ್ತದೆ.

ನೀವೆಲ್ಲ ಆರೋಗ್ಯವಾಗಿರುವದನ್ನು ತಿಳಿದು ಸಂತೋಷವಾಯಿತು. ನಾವೂ ಇಲ್ಲಿ ಆರೋಗ್ಯವಾಗಿದ್ದೇವೆ– ಮನಸ್ಸಿನಿಂದಲ್ಲ; ದೇಹದಿಂದ ಮನದ ಆರೋಗ್ಯ ಸರಿಯಾಗಿರದಿದ್ದರೆ ಬಂದ ಭಾಗ್ಯವೇನು ನೀನೇ ಹೇಳು.

ನಾನು ಯಾವ ಉತ್ಸಾಹದಿಂದ, ಯಾವ ಉದ್ದೇಶದಿಂದ ಈ ಹಳ್ಳಿ ಸೇರಿದೆನೋ ಅದನ್ನು ಅರ್ಥಮಾಡಿಕೊಳ್ಳದ ನನ್ನ ಸೀತೆಗೆ ಹಳ್ಳಿಯ ವಾಸ ಮನಸ್ಸಿಗೆ ಬಂದಿಲ್ಲ. ಅವಳು ಹಾಗೆಂದು, ನನ್ನೆದುರು ಬಾಯಿ ಬಿಚ್ಚಿ ಎಷ್ಟೋ ಸಲ ಹೇಳಿದ್ದಾಳೆ; ಹೇಳುತ್ತಲಿದ್ದಾಳೆ. ಹಳ್ಳಿಯ ಸಂಸ್ಕೃತಿ, ಆಚಾರ, ವಿಚಾರ, ನೀತಿ, ನಡತೆಗಳನ್ನೆಲ್ಲ ಅವಳು ಅಪಹಾಸ್ಯ ಮಾಡುತ್ತಾಳೆ. ನಗರದ ಬದುಕೊಂದೆ ಅವಳು ಅರಿತುಕೊಂಡ ಬದುಕು. ಹಳ್ಳಿಯ ವಿಚಾರವಾಗಿ ಅವಳು ಒಂದು ಕ್ಷಣವೂ ಯೋಚಿಸುವದಿಲ್ಲ. ಅದಕ್ಕಾಗಿ ನಾನು ಅಷ್ಟು ಮನಸ್ಸಿಗೆ ಹಚ್ಚಿಕೊಂಡಿಲ್ಲ ನಿಜ. ಆದರೆ ಅವಳು ಹಳ್ಳಿಯ ಜೀವನದೊಂದಿಗೆ ಅಲ್ಲಿಯ ವಾತಾವರಣದೊಂದಿಗೆ ಹೊಂದಿಕೊಳ್ಳ ಪ್ರಯತ್ನಿಸಿದ್ದರೂ ನನಗೆ ಸಂತೋಷವಾಗುತ್ತಿತ್ತು. ಆ ದಿಶೆಯಲ್ಲಿ ಒಂದು ದಿನವೂ ಪ್ರಯತ್ನಪಡಲಿಲ್ಲ. ಅವಳಿಗೆ ನನ್ನ ಹಾಗೂ ಹಳ್ಳಿಯ ಬದುಕಿನ ಸಂಬಂಧವಾಗಿ ತಿರಸ್ಕಾರ, ಅಸಡ್ಡೆ. ಹೆಚ್ಚು ಹೆಚ್ಚಿನ ಅವಳಿಗೆ ಆಳು ಕಾಳುಗಳು ಬೇಕು. ಊಟ, ಅಡಿಗೆ, ನೀರು ತರುವದಕ್ಕೆ ಎಲ್ಲದಕ್ಕು ಆಳುಗಳು ಬೇಕೆಂದು ಹೇಳುತ್ತಾಳೆ. ಇಸ್ತ್ರಿಯಾದ ಬಟ್ಟೆಗಳು ಅವಳಿಗೆ ಬೇಕು. ಅವೆಲ್ಲ ಹಳ್ಳಿಯಲ್ಲಿ ಹೇಗೆ ಸಾಧ್ಯ ನೀನೆ ಯೋಚಿಸು. ಅದಿಷ್ಟೇ ಅಲ್ಲ ಕೈಗೊಂದು ಕಾಲಿಗೊಂದು ಆಳುಗಳನ್ನಿಟ್ಟುಕೊಂಡರೆ ಈ ಹಳ್ಳಿಯಲ್ಲಿ ನಡೆದೀತೆ?

ಹಳ್ಳಿಗರು ತುಂಬ ದುಡಿಮೆಗಾರರು. ಗೆಳೆಯ, ಕತ್ತೆ ದುಡಿದ ಹಾಗೆ ದುಡಿಯುವದೇ ಅವರ ಬದುಕು ಎಂದರ್ಥನಲ್ಲ. ಅವರಿಗೂ ಆಸೆ-ಆಕಾಂಕ್ಷೆ, ಕನಸು-ನನಸು, ಸುಖ-ದುಃಖ ಎಲ್ಲ ಇವೆ. ಸರಿಯಾದ ರೀತಿಯಲ್ಲಿ ಸಾಮೂಹಿಕವಾಗಿಯೆ ಅವರು ಅವುಗಳಲ್ಲಿ ಪಾಲುಗೊಳ್ಳುತ್ತಾರೆ. ನಗರದಲ್ಲಿಯಂತೆ ಇಲ್ಲಿ ವೈಯುಕ್ತಿಕ ಕುಟುಂಬಕ್ಕೆ ವೈಯುಕ್ತಿಕ ಸ್ವಾರ್ಥಕ್ಕೆ ಬೆಲೆಯಿಲ್ಲ, ಎಲ್ಲರೂ ಒಂದಾಗಿ ಒಂದು ಕುಟುಂಬವಾಗಿ ಬಂದ ಸಂಕಟ-ಸಂತೋಷಗಳಲ್ಲಿ ಪಾಲುಗೊಳ್ಳುತ್ತಾರೆ ಇದರಿಂದಲೆ ಇಲ್ಲಿಯ ಬದುಕಿನಲ್ಲಿ ಹೆಚ್ಚಿನ ಆನಂದವಿದೆ-ಸುಖವಿದೆ,

ಇದನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ನನ್ನ ರಾಣಿಗಿಲ್ಲ. ಅವಳು ಎಲ್ಲವನ್ನೂ, ಎಲ್ಲರನ್ನೂ, ತಿರಸ್ಕಾರದಿಂದ, ಜಿಗುಪ್ಸೆಯಿಂದ ಕಾಣುತ್ತಾಳೆ

ಹೊನ್ನ ಯುಗಾದಿ ಹೊಸ ವರುಷದ ಮೊದಲ ದಿನ, ಹಳ್ಳಿಗರಿಗೆ ಅಂದು ವಿಶ್ರಾಂತಿಯ ಸಬ್ಬದ ದಿನ. ಅಂದು ಹನುಮಂತದೇವರೆದುರು ಪೂಜಾರಿ ಹಾಗು 'ದೇವದಾಸಿ'ಯರು ಓಕಳಿಯಾಡುವದು ನಮ್ಮ ಹಳ್ಳಿಯ ಮೊದಲಿನಿಂದಲೂ ಬಂದ ಸಾಂಪ್ರದಾಯ. ಈ ವರುಷವೂ ಓಕಳಿ ನಡೆಯಿತು. ಸಂಭ್ರಮದಿಂದ ಹೊಸ ಉಡಿಗೆ ಉಟ್ಟು ಓಕಳಿಯನ್ನು ನೋಡಲು ಊರಿನ ಸ್ತ್ರೀ-ಪುರುಷರುಷರೆಲ್ಲರು ಹೋಗಿದ್ದರು. ಊರಿನ ಹಿರಿಯರಿಂದ ನಮಗೂ ಕರೆ ಬಂತು, ಸೀತೆಗೆ ಆ ನೋಟವನ್ನು ತೋರಿಸಬೇಕೆಂದು ಎಷ್ಟು ಮುಂಬಾಲ ಬಿದ್ದು 'ಹೋಗೋಣ ಬಾ' ಎಂದು ಕರೆದರೂ ಸೀತ ಬರಲಿಲ್ಲ.

ಒಂದೇ ದಿನಕ್ಕೆ ಇದೆಲ್ಲ ಆಗಲಿ ಎಂದು ನಾನು ಹೇಳುವದಿಲ್ಲ. ಆದರೆ ಅವಳು ಎಲ್ಲರ ಸಂಗಡ ಬೆರೆಯಲಿ ಎಂದು ಹಾರೈಸುತ್ತೇನೆ. ಅದಕ್ಕವಳು ಒಪ್ಪುವದೇ ಯಿಲ್ಲ. ಯಾವಾಗಲೂ ಅವಳು ನನ್ನೆದುರು ಏನು ಹೇಳುತ್ತಾಳೆ ಗೊತ್ತೇ ?- 'ನನಗ ಇಲ್ಲಿದ್ದೇನೂ ಗೊತ್ತಾಗುವದಿಲ್ಲ. ನೀವ ಹೆಂಗೋ ಪಾಸಾಗಿ ಬಿ. ಎ. ದೊಡ್ಡವರಾಗ, ಒಂದ ನವಕರಿ ಹಿಡೀರಿ. ಅಲ್ಲೇ ಇರೋಣ' ಅಂತ.

ಅವಳ ಈ ಹಾಡಿಗೆ 'ಹೂಂ' ಎನ್ನಬೇಕೇ ? ಅದು ನನ್ನಿಂದ ಸಾಧ್ಯವಿಲ್ಲದ ಮಾತು. ಕಲಿಯುವಾಗಲೇ ಸೀತೆಯನ್ನು ಪ್ರೀತಿಸಿ ಅವಳ ಕೈ ಹಿಡಿದು ಅನಂತರ ನಾನು ಯಾವ ಉದ್ದೇಶದಿಂದ ಹಳ್ಳಿಗೆ ಮರಳಿದೆ ಎಂದು ನಿನಗ ಗೊತ್ತು. ಇರುವ ಒಕ್ಕಲಿಯ ಆಸ್ತಿಯಿಂದಲ ಸ್ವಂತದ ದುಡಿಮೆಯಿಂದ ಸ್ವತಂತ್ರನಾಗಿ ಬದುಕುವ ಆಸೆ ಯಿಟ್ಟುಕೊಂಡು ನಾನಿಲ್ಲಿಗೆ ಬಂದೆ. ಜತೆಗೆ ನನ್ನ ಹಳ್ಳಿಗರ ಅಜ್ಞಾನ, ನಿರಕ್ಷರತೆಗಳನ್ನು ಕಳೆಯಲು ನಾನು ದುಡಿದರೆ ನನ್ನ ಜನರಿಗೆ ಒಂದು ಪ್ರಯೋಜನವಾದರೂ ಆದೀತು ಎಂದು ಹಾರೈಸಿದೆ. ಎಲ್ಲರೂ ನವಕರಿಯ ಬಿಸಿಲುಗುದುರೆಯನ್ನೇರಿ ಪಟ್ಟಣಗಳಿಗೇ ನಡೆದರೆ ಹಳ್ಳಿಗಳ ಗತಿ ಏನು ? ಹಳ್ಳಿಯ ಬದುಕು ವಿಸ್ತಾರವಾದ 'ಪಡಬಿದ್ದ' ಭೂಮಿಯಾಗಿದೆ. ಅದನ್ನು ದುಡಿಮೆಯಿಂದ, ಶ್ರದ್ಧೆಯಿಂದ ಫಲವತ್ತಾದ ಭೂಮಿಯನ್ನಾಗಿ ಮಾರ್ಪಡಿಸುವದು ನಮ್ಮ ಕರ್ತವ್ಯ ಅಲ್ಲವೇ ?

ಇದೆಲ್ಲ ನನ್ನ ಸೀತೆಗೆ ತಿಳಿಯದ್ದಕ್ಕಾಗಿ ತುಂಬ ವಿಷಾಧವೆನಿಸುತ್ತದೆ. ನನ್ನ ತಾಯಿಯೂ ಅದೇ ಅಭಿಪ್ರಾಯ ಪಡುತ್ತಾಳೆ. ನನ್ನ ತಾಯಿಯನ್ನು ನೀನು ಕಂಡಿಲ್ಲ ರಾಘು ಹಿಂದೂ ಸಮಾಜದ ನಿಕೃಷ್ಟ, ಸ್ಥಿತಿಯ ಪ್ರತಿಬಿಂಬ ಅವಳ ಬಾಳು. ಆ ಸಹನೆ, ಆ ತ್ಯಾಗ, ಆ ಶಾಂತಿ ಅವಳಿಗೆ ಹಳ್ಳಿಯ ಸಮಾಜ ತೊಡಿಸಿದ ವಿದ್ಯಾಭರಣಗಳು ನನ್ನ ತಾಯಿ ಸಾಮಾನ್ಯ ಮನೆತನವೊಂದ ರಲ್ಲಿ ಹುಟ್ಟಿದವಳು. ತಂದೆಯ ಸಂಗಡ ನಾಲ್ಕು ವರ್ಷ ಸುಖವಾಗಿ ಬಾಳಿ ನನ್ನ ಮುದ್ದು ಮೊಗವನ್ನು ನೋಡಿ ನಲಿದಾಡುವ ಹೊತ್ತಿಗೆ ಅಪ್ಪ ಕಣ್ಣು ಮುಚ್ಚಿದ. ಆದರೂ ಅಮ್ಮ ಧೈರ್ಯಗೆಡಲಿಲ್ಲ. ಇನ್ನೊಬ್ಬರ ಆಶ್ರಯಕ್ಕೆ ಕೈಯೊಡ್ಡಲಿಲ್ಲ. ಬರುವ ವಿಘ್ನ ಪರಂಪರೆಗಳೆನ್ನೆಲ್ಲ ಎದುರಿಸಿ, ನನ್ನನ್ನು ದೊಡ್ಡವನನ್ನಾಗಿ ಮಾಡಿದಳು. ತ್ಯಾಗ, ಸಹನೆ, ಅಂತಃಕರುಣಗಳಿಂದ ನನ್ನನ್ನು ಪೋಷಿಸಿದಳು. ಅಂತಹ ತಾಯಿಯ ಒಂದು ಬಯಕೆ ನೆರ ವೇರಿಸುವದು ನನ್ನ ಕರ್ತವ್ಯ ಅಲ್ಲವೇ ?

ಅಯ್ಯೋ, ಕರ್ತವ್ಯ ಎನ್ನುತ್ತೀನಲ್ಲ; ಸೀತೆಗೆ ನನ್ನ ತಾಯಿಯ ವಿಚಾರವಾಗಿ ಸ್ವಲ್ಪ ಕೂಡ ಆದರ, ಅಭಿಮಾನಗಳಿಲ್ಲ. ಅಮ್ಮ ಪಟ್ಟ ಕಷ್ಟ ಮಾಡಿದ ತ್ಯಾಗಗಳನ್ನು ಬಿಚ್ಚಿ ಹೇಳಿದರೂ ಸೀತೆಗೆ ವಿಶ್ವಾಸವಿಲ್ಲವಾಗಿದೆ,

ನಿನ್ನೆ ಏನಾಯಿತು ಅಂತೀಯ ? ನಾನು ಸಂಜೆ ಹೊಲದಿಂದ ಮನೆಗೆ ಮರಳಿ ಸ್ವಲ್ಪ ಚಹ ತೆಗೆದುಕೊಂಡು ಮೇಲ್ಮಾಳಿಗೆಯಮೇಲೆ ಬೇಸರ ಕಳೆ ಯಲು ಹೋಗಿ ಕುಳಿತೆ. ರಾಮದೇವರ ಗುಡಿಗೆ ಪುರಾಣಕ್ಕೆ ಹೋದ ತಾಯಿ ಅಷ್ಟರಲ್ಲಿ ಮನೆಗೆ ಬಂದಳು. ನಾನೂ ಕತ್ತಲಾಯಿತೆಂದು ಕೆಳಗಿಳಿಯ ಲಾರಂಭಿಸಿದೆ,

'ಸೀತಾ, ಅಳ ಬಂದ ದೀಪಾ ಹಚ್ಚಲಿಲ್ಲಂದ್ರ ಏನಾತವ್ವ ? ನೀ ಹಚ್ಚ ಬಾರದಿತ್ತs? ಕತ್ಲ್ಯಾಗ ಹಂಗ ಒಬ್ಬಾಕೀನs ಕೂಡ್ರಬಾರ್ದು ನಂತಾಯಿ, ಮನೀಗೆ ಲಕ್ಷ್ಮೀ ಬರೂ ಹೊತ್ತಂತ ಹಿರೇರು ಹೇಳತಿರತಾರ, ಹಿಂಗ ಮಾಡಿದರ ಅರಿಷ್ಟ ಬಡೀತದ ಮನೀಗೆ....! "

ತಾಯಿ ಶಾಂತಚಿತ್ತಳಾಗಿ ಸೀತೆಗೆ ಹೇಳುತ್ತಿರುವದನ್ನು ನಾನು ಬಾಗಿ ಲಲ್ಲಿ ನಿಂತುಕೊಂಡು ಕೇಳಿದೆ.

' ನಾ ನಿಮ್ಮ ಮನೀ ಆಳಲ್ಲ. '

ಸೀತೆ ಕೊಟ್ಟ ಉತ್ತರ ಇದು. ಗೆಳೆಯ, ಎಂತಹ ಕಠೋರತೆ ತುಂಬಿತ್ತು ಅವಳ ಧ್ವನಿಯಲ್ಲಿ ! ಅಮ್ಮ ಪ್ರತಿಯಾಗಿ ಏನನ್ನೂ ಹೇಳಲಿಲ್ಲ. ಹೇಳಲಾರಳು. ಅವಳ ಮನಸ್ಸು ತುಂಬ ಸೂಕ್ಷ್ಮವಾದುದು. ಅವಳ ನೊಂದೆದೆಯಿಂದ ನಿಟ್ಟುಸಿರು ಹೊರಬಿದ್ದುದನ್ನು ಮಾತ್ರ ನಾನು ಕೇಳಿದೆ. ಸೀತೆ ಕಲ್ಲಿನಂತೆ ಹಾಗೆಯೆ ಕುಳಿತಳು. ಅಮ್ಮ ದೀಪ ಹಚ್ಚಿದಳು.

ಇದು ನನ್ನ ಬಾಳು ರಾಘು. ನಗರದ ಹುಡಿಗಿಯನ್ನು ಮದುವೆ ಮಾಡಿಕೊಂಡಿದ್ದರ ಫಲ ಇದು. ನನ್ನ ಬಾಳಿನ ಏಳು—ಬೀಳುಗಳೆಲ್ಲ ಸೀತೆಯ ಮನಸ್ಸಿನ ಮೇಲೆ ನಿಂತಿವೆ.

ನಿನ್ನ ಮಡದಿ ಲೀಲಾ ಇಷ್ಟು ಕಠೋರವಾಗಿ ನಿನ್ನನ್ನು ವಿರೋಧಿಸಲಾರಳೆಂದು ನನಗೆ ವಿಶ್ವಾಸವಿದೆ.

ಓಲೆ ಬೇಗ ಬರೆ.

ನಿನ್ನವ,

**ರಾಮು**

●

ಪ್ರಿಯ ರಾಮು, ೮—೪—೪೫

ವಾರಾನು ವಾರವೆಲ್ಲ ಸವಡು ಮಾಡಿಕೊಂಡು ನಿನಗೆ ಕಾಗದ ಬರಿಯಬೇಕೆಂದು ಪ್ರಯತ್ನಿಸಿದೆ ಸಾಧ್ಯವಾಗಲಿಲ್ಲ. ಹಾಳು ಕಚೇರಿಯ ಕೆಲಸ. ಕತ್ತೆ ದುಡಿದ ಹಾಗೆ ದುಡಿಯುವದು ನೋಡು. ಅದಿಷ್ಟೇ ಅಲ್ಲ– ಇಲ್ಲಿ ಪದವೀಧರನಿಗೂ ಬರಿಯ ಮ್ಯಾಟ್ರಿಕ್ ಪಾಸಾದವನಿಗೂ ಆರಂಭದಲ್ಲಿ ಯಾವ ಭೇದವೂ ಇಲ್ಲ ನನ್ನಂತೆಯೇ ಸಾಮಾನ್ಯ ಕಾರಕೂನನಾಗಿ ನನ್ನಷ್ಟೇ ಅಧಿಕಾರ ನಡೆಯಿಸುತ್ತಾನೆ ಅವನೂ. ಇದೇನೋ ಸರಿಯಾಗಿ ತೋರುವದಿಲ್ಲ.

ನಿನ್ನ ದೀರ್ಘವಾದ ಕಾಗದ ಸಾದ್ಯಂತವಾಗಿ ಓದಿದೆ. ನಿನ್ನ ಪತ್ನಿಯ ವಿಚಾರವಾಗಿ ಏನೋ ಬರೆದಿದ್ದಿ. ಆದರೆ ಅದೆಲ್ಲ ತಪ್ಪು. ಅವಳ ತಲೆಯ ಮೇಲೆಯೆ ಹೊರಿಸುವದು ನನಗೆ ನ್ಯಾಯವಾಗಿ ತೋರುವದಿಲ್ಲ.

ನಿನ್ನ ಮಡದಿ ಹೇಳುವ ಹಾಗೆ ಆ ದರಿದ್ರ ಹಳ್ಳಿ ಬಿಟ್ಟು ಇಲ್ಲಿ ವಾಸವಾಗುವದೇ ಹೆಚ್ಚು ನೆಟ್ಟಗೆ ಎಂದು ನನಗನ್ನಿಸುತ್ತದೆ. ನಿನ್ನ ಹೆಂಡತಿಯ ಮಾತನ್ನೂ ನಡೆಯಿಸಿದಂತಾಗುತ್ತದೆ. ನಿನ್ನ ಗೆಳೆತನದ ಫಲ ದೊರೆತ ಸಂತೋಷ ನನಗಾಗುತ್ತದೆ. ನಗರದ ಜೀವನದಲ್ಲಿ ನಿನ್ನ ಬದುಕೂ ಬೆಳಗುತ್ತದೆ. ಬೇಕೆಂದರೆ ಕಲೆಕ್ಟರ ಸಾಹೇಬರ ವರೆಗೆ ವಸೀಲಿ ಒಯ್ದು ನಿನಗೆ ಕೆಲಸ ಕೊಡಿಸುವ ಜವಾಬ್ದಾರಿಯನ್ನು ನಾನು ಹೊತ್ತುಕೊಳ್ಳುತ್ತೇನೆ.

ಅದೇನೆ ಇರಲಿ, ನಿನ್ನ ಬದುಕು ಹೇಗಿದ್ದರೂ ಬೆಳಗಿಯೇ ಬೆಳಗುತ್ತದೆ. ರಾಮು. ಯಾಕಂದರೆ ತಂಗಿ ಸೀತಮ್ಮ ನಾಗರಿಕ ಸಂಸ್ಕಾರ ಹೊಂದಿದವಳು. ವಿದ್ಯೆಯ ಅರಿವೂ ಇದೆ, ಆದರ ನನ್ನ ಪತ್ನಿ ಲೀಲಳನ್ನು ನೆನೆದರೊ– 'ದೇವರೆ, ಎಷ್ಟು ಜನ್ಮದ ತಪಸ್ಸು ಮಾಡಿದೆನೆಂದು ನನಗೆ ಈ ಕನ್ಯಾಮಣಿಯನ್ನು ಗಂಟು ಹಾಕಿದೆಯಪ್ಪಾ' ಎಂದು ನಿಮ್ಮ ದೇವರನ್ನು ಚನ್ನಾಗಿ ಬೈಯುತ್ತೇನೆ. ಈ ಅಜ್ಞಾನದ ಹಳ್ಳಿಯ ಹುಡುಗಿ ಗಂಟು ಬೀಳದಿದ್ದರೆ ನಗರದ ಹುಡುಗಿಯ ಕೈಹಿಡಿದು ಎಷ್ಟು ಸುಖವಾಗಿರುತ್ತಿದ್ದ ರಾಮು........?

ವಿಚಿತ್ರ ನೋಡು. ಮೊನ್ನೆ ಅವಳನ್ನು ಕೇಳಿದೆ.

' ನಿನ್ನಾಯುಷ್ಯದಾಗ ಒಮ್ಮೆರ ಪಟ್ಟಣ ನೋಡಿದ್ದೇನು? '

' ಈಗ ನೋಡಲಿಕ್ಕೆ ಹತ್ತೀನಲ್ಲ! '

' ಈಗಲ್ಲ ಮಾರಾಯಳ್ಳ ನಾ ನಿನ್ನ ಗಂಡ ಆಗೂದಕಿಂತ ಮದಲ '

' ನಾ ಪಟ್ಟಣದಾಗಿರೂ ನಿಮ್ಮ ಕೈಹಿಡೀತೀನಿ ಅಂತ ಕನಸ ಬಿದ್ದಿದ್ರ ಮ್ಯಾಲೆ ಮ್ಯಾಲೆ ಪಟ್ಟಣ ನೋಡಿಕೊಂಡ ಬರತಿದ್ದೆ'

'ಹಂಗಾರ ಕನಸಿನಾಗೂ ಇಲ್ಲದಂಗ್ಯಾ ನಿನ್ನ ಮದಿವಾತು ಅನಬಾರ್ದಾ?'

' ಅದು ನಿಮಗ ಗೊತ್ತಾಽ ಅದಲ್ಲಾ. '

ತನ್ನ ಮೂವತ್ತೆರಡೂ ಹಲ್ಲುಗಳನ್ನು ಪ್ರದರ್ಶಿಸುತ್ತಹೇಳಿದಳು ಲೀಲಾ. ವಿದ್ಯೆಯಿಲ್ಲ, ನಗರದ ಸಂಸ್ಕಾರವಿಲ್ಲ, ಹೋಗಲಿ. ಹೇಳಿದ್ದನ್ನು ತಿಳಿದುಕೊಳ್ಳುವ ಶಕ್ತಿಯಿಲ್ಲ. ಇಂತಹ ' ದಡ್ಡ ' ತಲೆಯ ಹುಡುಗಿಯರ ಜತೆಗೆ ಬಾಳ ಬೇಕಲ್ಲ ರಾಮು, ಇದಕ್ಕೇನು ಹೇಳುತ್ತೀ ?

ನಾನಿಟ್ಟುಕೊಂಡ ಅದೆಷ್ಟೋ ಆಸೆ, ಆಕಾಂಕ್ಷೆಗಳು ಲೀಲೆಯಿಂದಾಗಿ ಹುಡಿಗೂಡಿ ಹೋಗಲಾರಂಭಿಸಿವೆ. ನಾಗರಿಕತೆಯ ನೆಳಲಿನಲ್ಲಿ ನನ್ನ ಭವ್ಯ ಬಾಳನ್ನು ಬೆಳಗಿಸ ಬೇಕೆಂದಿದ್ದ ಕನಸು ಕರಗುತ್ತ ಹೋಗುತ್ತಲಿದೆ.

ನಮ್ಮ ಮಾಮಲೇದಾರ ಸಾಹೇಬರಿಗೆ ವರ್ಗವಾಗಿತ್ತು. ಅವರನ್ನು ಬೀಳ್ಕೊಡುವ ಸಮಾರಂಭವನ್ನೇರ್ಪಡಿಸಿದ್ದೆ. ಈ ರೆವ್ಹಿನ್ಯೂ ಖಾತೆಯಲ್ಲಿ ಮೇಲಾಧಿಕಾರಿಗಳ 'ಮರ್ಜಿ' ಇಲ್ಲದಿದ್ದರೆ ಏನೂ ನಡೆಯುವಂತಿಲ್ಲ ನೋಡು· ನಾವೆಲ್ಲ ಅವರಿಗೆ ಹೀಗೆ ಮರ್ಯಾದೆ ಸಲ್ಲಿಸದೆ ಹೋದರೆ ಇನ್ನೊಮ್ಮೆ ಕೈಯಲ್ಲಿ ಸಿಕ್ಕಾಗ ತುಂಬ ಕಾಡಿಸುತ್ತಾರೆ. ಅದಿಷ್ಟೇ ಅಲ್ಲ; ನನ್ನ ಕೆಲಸದ ವಿಚಾರ ವಾಗಿ ಅವರಿಂದ ಒಳ್ಳೇಯ ರಿಮಾರ್ಕು ಹೋಗಿರದಿದ್ದರೆ ನನ್ನ ಕೆಲಸ ಕಾಯಂ ಆಗುವದೂ ನಿಲ್ಲುತ್ತಿತ್ತು.

ಇರಲಿ, ಎಲ್ಲರಿಗೂ ಔತಣ ಕೊಟ್ಟು ಬರುವಾಗ ಜವಳಿ ಅಂಗಡಿಗೆ ಹೋಗಿ ಬನಾರಸಿಪತ್ತಲ, ರೇಶ್ಮೆಯ ಬ್ಲಾಜೊಂದನ್ನು ಅವಳಿಗಾಗಿ ಕೊಂಡು ತಂದೆ. ಅದರ ಉದ್ದೇಶ ಇಷ್ಟೆ– ನನ್ನ ಹೇಂಡತಿ ತನ್ನ ಸಣ್ಣತನವನ್ನು ಎಲ್ಲರ ಎದುರು ಪ್ರದರ್ಶಿಸಬಾರದು ಎಂದು ಅವಳೆದುರು ಆ ಗಂಟನ್ನಿಟ್ಟು ಹೇಳಿದೆ·

"ನಮ್ಮ ಸಾಹೇಬ್ರಿಗೆ ವರ್ಗಾಗೇದ. ಅದಕ ನಾಳೆ ಅವರಿಗೆ ಟೀ ಪಾರ್ಟಿ ಮಾಡಸ್ತೇನಿ. ನೀನೂ ಅಷ್ಟ ನಾಳ್ಯಾರ ನನ್ನ ಮ್ಯಾಲೆ ಮೆಹರ್ ಬಾನಗಿ ಮಾಡಿ ಇವನ್ನ ಉಟಗೊಂಡ ಟಾಪ–ಟೀಪಾಗಿರು.

ಲೀಲೆ ಪ್ರತಿಯಾಗಿ ಏನು ಹೇಳಿದಳು ಗೊತ್ತೆ ?

'ಅಯ್ಯಯ್ಯ, ನಾ ಹಿಂತಾವ ಉಟ್ಟೇ ಇಲ್ಲ. ನನಗ ಅವು ಬ್ಯಾಡ್ಕ ಬ್ಯಾಡ ಈಗ್ಲ ಹೋಗಿ ತಿರಗಿ ಕೊಟ್ಟ ಬರ್ರಿ.,

ಎಂದು ನನ್ನ ಮುಖಕ್ಕೆ ನೀರೆರಚಿದಳು. ಅನಂತರ ಏನೋ ನೆನಪಾದವರ ಹಾಗೆ ಒಮ್ಮೆಲೆ ಕೇಳಿದಳು.

'ಅಲ್ಲ್ಕ ಇವಕೆಷ್ಟ ರವಪಾಯ್ತು? '

'ನೂರ ರೂಪಾಯಿ.'

'........ನಿಮುಗ ಸಂಸಾರ ಹೆಂಗ ಮಾಡಬೇಕನ್ನೂದ್ಕ ಗೊತ್ತಿದ್ಹಂಗಿಲ್ಲ. ಅಲ್ರಿ, ಸುಮ್ಮಸುಮ್ನ ಇಷ್ಟ ದುಡ್ಡ ಹಾಳ ಮಾಡಿದರ ಯಾತಕ್ಕ ಬಂದ್ಹಂಗಾತು? ನಾಳಿ ಮಕ್ಳಾವ........ ಮರಿ ಅವ........ '

' ಕರ್ಮ ' ಎಂದು ಹಣೆ, ಹಣೆ ಜಜ್ಜಿಕೊಂಡೆ. ಇನ್ನೇನು ಮಾಡಲಿ ಇಂತಹ ಕಲ್ಲಿನ ಮೂರ್ತಿಯ ಸಂಗಡ ನೀನೇ ಹೇಳು. ಸಮಾರಂಭ ಚೆನ್ನಾಗಿ ನೆರವೇರಿತು. ಅವಳು ಮಾತ್ರ ಆ ಸೀರೆ ಉಡಲಿಲ್ಲ. ಕಪಾಟಿನಲ್ಲಿ ಹಾಗೆಯೆ ಬಿದ್ದಿವೆ. ಅವುಗಳನ್ನು ತಿರುಗಿ ಕೊಟ್ಟು ಬರಬಾರದೆಂದೆ ನನ್ನ ಹಟ.

ಅಬ್ಬ! ಅವಳು ನೋಡು ರಾಮು,- ಮೊಳಕೈಗೆ ಬರುವ ಕುಪ್ಪಸ, ಹಣೆಯ ತುಂಬ ಕುಂಕುಮ, ದರಿದ್ರ ಕಗ್ಗ ಸೀರೆಗಳಿಂದಲೆ ತನ್ನನ್ನಲಂಕರಿಸಿ ಕೊಳ್ಳುತ್ತಾಳೆ. ಅವುಗಳನ್ನು ಬಿಡಿಸುವದು ಈ ಜನ್ಮದಲ್ಲಿ ಏನೂ ಸಾಧ್ಯ ವಿಲ್ಲ ಅಂತ ಅನ್ನಿಸುತ್ತದೆ.

ತಾಯಿ, ತಂದೆ ಒಪ್ಪಿದರೆ ಅವಳನ್ನೆಂದೊ ತವರು ಮನೆಗೆ ಓಡಿಸಿ ಬಿಡುತ್ತಿದ್ದೆ. ತಾಯಿ ತನ್ನ ದೂರದ ಸಂಬಂಧದ ಹುಡುಗಿ ಎಂದು ಹಟ ಹಿಡಿದಲ್ಲಿಯೆ ಅವಳ ಕೈಹಿಡಿಯಬೇಕಾಯಿತು. ತಾಯಿ–ತಂದೆಗಳ ಪ್ರೀತಿಗೆ ಪಾತ್ರಳಾದಲ್ಲಿಯೆ ನಾನು ಬಾಯಿ ಹೊಲಿದುಕೊಂಡು ಕೂಡ್ರಬೇಕಾಯಿತು.

ನೋಡು, ರಾತ್ರಿ ನನಗೆ ಮನೆಗೆ ಬರಲು ತಡವಾಗುತ್ತದೆ. ಕೆಲಸ ಮಾಡಿ,ಮಾಡಿ ಬೇಸತ್ತು ಇಸ್ಪೆಟ್ ಆಟಕ್ಕೆ ಕ್ಲಬ್ಬಿಗೆ ಹೋಗಿಯೊ, ಸಿನಿಮಾಕ್ಕೆ ಹೋಗಿಯೊ ಮನೆಗೆ ಬಂದರೆ ಮಧ್ಯರಾತ್ರಿಯಾದರೂ ನನಗಾಗಿ ಕಾಯುತ್ತ ಕುಳಿತಲ್ಲಿಯೆ ಗೊರಕೆ ಹೊಡೆಯುತ್ತಿರುತ್ತಾಳೆ. ಅವಳ ಈ ಸ್ಥಿತಿ ಕಂಡು ಮರುಕದಿಂದ 'ನಾನು ಬರುವದು ತಡವಾದರೆ ಊಟ ಮಾಡಿ ಬಿಡು' ಎಂದು ಹೇಳಿ ಹೇಳಿ ಬೇಸತ್ತೆ. ನಮ್ಮಜ್ಜ ಸ್ವರ್ಗದಿಂದ ತಿರುಗಿ ಬಂದು ಹೇಳಿದರೂ ಅವಳೇನೂ ಊಟ ಮಾಡುವಂತಿಲ್ಲ. ' ಹಾಳಾಗಲಿ ' ಎಂದು ಸುಮ್ಮನಿದ್ದು ಬಿಟ್ಟಿದ್ದೇನೆ.

ಹೀಗೆಯೆ ನನ್ನ ಬಾಳು 'ಬೀಳುತೇಳುತ' ಸಾಗಿದೆ. ಬರಿ ಗೋಳಿನಲ್ಲಿಯೆ ಎಲ್ಲಿ ಮುಕ್ತಾಯವಾಗುವದೋ ಎಂದು ಹೆದರಿಕೆ ನನಗೆ.

ನಿನ್ನವ,

**ರಾಘು**

೨

ಗೆಳೆಯ ರಾಘು, ೧—೫—೪೫

ತಡವಾಗಿ ಉತ್ತರ ಬರೆಯುತ್ತಿರುವದಕ್ಕೆ ಕ್ಷಮೆಇರಲಿ. ತಾಯಿ ಮಲೇರಿಯಾಕ್ಕೆ ತುತ್ತಾಗಿ ಬಳಲುತ್ತಲಿದ್ದ ಮೂಲಕ ಬೇಗನೆ ಬರೆಯಲಾಗಲಿಲ್ಲ.

ತಾಯಿ, ಜ್ವರ ಬಂದು ಮಲಗಿದ್ದರೂ ಅವಳ ಯೋಗ ಕ್ಷೇಮವನ್ನು ಸೀತೆ ಸರಿಯಾಗಿ ನೋಡಿಕೊಳ್ಳಲಿಲ್ಲ. ಏನು ಮಾಡುವದು ? ನನಗೆ ಹೇಳತೀರದಷ್ಟು ತೊಂದರೆಯಾಯಿತು. ನಮ್ಮ ಹಳ್ಳಿಯಲ್ಲಿ ನಮ್ಮ ಜಾತಿಯವರ ಮನೆಗಳೇ ಇಲ್ಲ. ನನಗೆ ಜಾತಿಯಲ್ಲಿ ಯಾವ ವಿಶ್ವಾಸವೂ ಇಲ್ಲ ನಿಜ. ಆದರೆ ತಾಯಿಯ ಹಳೆಯ ಆಚಾರದಿಂದಾಗಿ ಅವಳ ಪ್ರಾಣ ಹೋಗುವ ಹೊತ್ತು ಬಂದಿತ್ತು.

ಪೂರ್ವದ ಸಾಂಪ್ರದಾಯಕ್ಕೆ ಒಗ್ಗಿ ಹೋದ ಅಮ್ಮ ನೀರನ್ನು ಮಡಿಯಿಂದಲ್ಲದೆ ತೆಗೆದುಕೊಳ್ಳುತ್ತಿರಲಿಲ್ಲ. ನೆಟ್ಟಗಿದ್ದಾಗ ಅವಳೇನೂ ತನ್ನ ಆಚಾರ ನಿಯಮಗಳನ್ನು ಚಾ-ಚೂ ತಪ್ಪದೆ ನಡೆಯಿಸಿಕೊಂಡು ಬಂದಿದ್ದಳು. ಈಗ ಹೇಗೆ ಮಾಡುವದು ? ಸೀತೆ ನನ್ನಂತೆಯೆ ಮಡಿ, ಹುಡಿಗಳನ್ನು ಗಾಳಿಯಲ್ಲಿ ತೂರಿದಳು. ಅದೇನೊ ಸರಿ. ಅದಕ್ಕೆ ನನ್ನ ಆಕ್ಷೇಪಣೆಯೂ ಇರಲಿಲ್ಲ. ಆದರೆ ತಾಯಿಯ ಪ್ರಾಣ ಹೋಗುವ ಕಠಿಣ ಪರಿಸ್ಥಿತಿಯಲ್ಲಿ ಇನ್ನೇನು ಮಾಡಬೇಕು ನೀನೇ ಹೇಳು. ಸೀತೆಗೆ ಮಡಿಯಿಂದ ನೀರು ನೀರು ತರಲು ಹೇಳಿದೆ. ಅವಳು. ಖಡಾ ಖಂಡಿತವಾಗಿ ಹೇಳಿಬಿಟ್ಟಳು

‘ ಮಡಿ , ಮಡಿ ಅಂತ ಹಾರ್‍ಯಾಡುದು ನನ್ನ ಕಡಿಂದ ಆಗೂದುಲ್ಲ ನೋಡ್ರಿ.... ’ ಹೌದು. ಅವಳು ನುಡಿದಂತೆಯೆ ನಡೆದಳು. ನಾನು ಅಮ್ಮನ ಪ್ರಾಣ ಉಳಿಸಲು ನಾಲ್ಕುದಿನ ‘ ನೀರಿನ ಕಟ್ಟೆ ’ ಮಾಮಲೇದಾರನಾದೆ.

ನಿನ್ನ ಭಾವಿ ಹುದ್ದೆಯನ್ನು ಕಿತ್ತು ತಿಂದೆನೆಂದು ಸಿಟ್ಟಾಗಬೇಡ ಗೆಳೆಯ. ಅಂತಹ ಎಲ್ಲ ಆಸೆಗಳನ್ನೂ ತ್ಯಜಿಸಿ ಇಲ್ಲಿಗೆ ಬಂದೆ. ಇಲ್ಲಿಗೆ ಬಂದದ್ದಕ್ಕೆ ‘ ನೀರಿನ ಕಟ್ಟೆ ’ ಯ ಮಾಮಲೇದಾರನಾಗುವ ಸುಸಂಧಿ ಒದಗಿತು. ಅಂತೂ ನಿನಗಿಂತ ಮೊದಲೆ ನಾನು ಮಾಮಲೇದಾರನಾದ ಹಾಗಾಯಿತಲ್ಲ ?

ತಾಯಿಯ ಜ್ವರ ಈಗ ನಿಂತಿವೆ. ನಿಶ್ಶಕ್ತಿ ಮಾತ್ರ ಇನ್ನೂ ಇದೆ. ಇನ್ನೆಲ್ಲ ನೆಟ್ಟಗೆ.

ನಿನ್ನವ,

ರಾಮು

ಗೆಳೆಯ, ೮—೫—೪೫

ನಿನ್ನ ಕಾಗದ ತಲುಪಿತು. ಗೊಡ್ಡು ಆಚಾರಕ್ಕೆ ನೀನೂ ಇಳಿಯ ಬೇಕೆ?–ನೀನು ನಿನ್ನ ಹಳ್ಳಿಯರೀತಿಗೆ ಬಾಗಬಹುದೆಂದು ನಾನು ನಂಬಿರಲಿಲ್ಲ ಬಿಡು. ಹಾಗೆ ಮಾಡಬೇಡ ಮಹರಾಯ- ನಾಳೆ ನಾವು ನಿಮ್ಮೂರಿಗೆ ಬಂದರೆ ನಮ್ಮನ್ನೆಲ್ಲ ಹೊರಗೆ ಕುಳ್ಳಿರಿಸಿ ಊಟ ಹಾಕೀ ಮತ್ತೆ.

ನಿನ್ನ ತಾಯಿಯವರ ಜಡ್ಡು ಕಡಿಮೆಯಾಗಿರುವದನ್ನು ಕೇಳಿ ನನಗೆ ಸಂತೋಷವಾಯಿತು. ಅವರನ್ನು ನಿನ್ನ ದಾರಿಗೆ ತೆಗೆದುಕೊಂಡು ಬಾ. ಅಂದರೆ ನಿನ್ನ ಮಡದಿ ಪುರಾಣಕಾಲದ ಸೀತೆಯಂತೆ ನಿನ್ನ ಮನಸ್ಸಿನ ಮೂರ್ತಿಯಾಗುತ್ತಾಳೆ.

ಇಷ್ಟೆಲ್ಲ ಬರೆಯುವ ನನ್ನ ಮನೆಯಲ್ಲೂ ಅದೇ ಗತಿ ನೋಡು. ಲೀಲೆ ನನ್ನ ತಾಯಿ-ತಂದೆಗಳನ್ನು ದಿನ ದಿನಕ್ಕೆ ತನ್ನ ದಾರಿಗೆ ಆಕರ್ಷಿಸುತ್ತಲಿದ್ದಾಳೆ. ನನ್ನನ್ನಾರು ಕೇಳಬೇಕಪ್ಪ ಇನ್ನು ? ಮನೆಯಲ್ಲಿ ಪೂಜೆ-ಪುನಸ್ಕಾರ ಅದೇನೋ ನಡೆಯುತ್ತದೆ ನೋಡು.

ಈಗ ನಾಲ್ಕು ದಿನಗಳ ಹಿಂದಿನ ಮಾತು. ಆಗ ಏನಾಯಿತು ಅಂತೀಯ ? ಆಫೀಸಿನ ಕೆಲಸ ಬಹಳವಿತ್ತು. ಬೆಳಗು ಜಾವನೆ ಎದ್ದು ಚಹ ಕುಡಿದು ಅದನ್ನೆಲ್ಲ ಮುಗಿಸಿ ಬಿಡಬೇಕೆಂದು ಪ್ರತಿಜ್ಞೆ ಮಾಡಿ ಕುಳಿತೆ. ಎಂಟು ಗಂಟೆಯಾದರೂ ಮುಗಿಯಲಿಲ್ಲ. ಮೇಲಿಂದ ಮೇಲೆ ಚಹ ಬೀಳುತ್ತಿದ್ದರೆ ಕೆಲಸ ಮಾಡುವ ಸ್ಫೂರ್ತಿ ನನಗೆ ಬತ್ತುವದೆ ಇಲ್ಲ ಎಂದು ನಿನಗ ಗೊತ್ತಿದೆ. ಚಹಾಕ್ಕಾಗಿ ಅಡಿಗೆ ಮನೆಗೆ ಹೋಗಬೇಕಾಯಿತು.

ಹೋಟಲಿನಿಂದ ಚಹ ತರಿಸಿ ಕುಡಿಯಬಹುದಾಗಿತ್ತೇನೋ ನಿಜ. ಆದರೆ ಅಷ್ಟು ಸಮಯ ಕಾಯ್ದು ಅರ್ಧ ಆರಿದ ಚಹ ಕುಡಿಯಲು ನನ್ನ ಕಾದ ತಲೆ ಸಮ್ಮತಿಸಲಿಲ್ಲ. ಲೀಲೆಗೆ ಚಹ ಕುಡಿಯಲು ಹೇಗೆ ಬರಲಾರದೊ ಹಾಗೆಯೇ ಚಹ ಮಾಡಲೂ ಬರಲಾರದು. ಅಷ್ಟು ವಿಚಿತ್ರ ಅವಳ ಪರಿಸ್ಥಿತಿ ಅದರೊ ತಾಯಿ ನನಗಾಗಿ ಅವಳಿಗೆ ಚಹ ಮಾಡುವ ವಿಧಾನಗಳನ್ನು ಕಲಿಸಿದ್ದಾಳೆ; ನನ್ನ ಪುಣ್ಯ !

ಹೋಗಲಿ ಮುಂದೇನಾಯಿತು ಅಂತೀಯ. ನಾನು ಸೀದಾ ಅಡಿಗೆ ಮನೆಗೆ ಹೋದೆ. ಬಾಗಿಲಲ್ಲಿ ನಿಂತುಕೊಂಡು ಹೇಳಿದೆ.

' ಲೀಲಾ. '

' ........ '

' ಲೀಲಾ.... ಏ ಲೀಲಿ.... '

ಒಳಗಿನಿಂದ ಉತ್ತರ ಬರಲಿಲ್ಲ. ಅಡಿಗೆ ಮಾಡುತ್ತಿರುವ ಅವ್ವ ಹೇಳಿದಳು. ಅಕಿ ಮೂಕ್ಯಾಗಿ ಗೌರಿ ಪೂಜಿ ಮಾಡತಾಳ '

' ಹಾಳಾತ ಅಕಿ ಗೌರಿ ಪೂಜಾ! '

ನಾನು ಅಬ್ಬರಿಸುತ್ತ ಒಳಗೆ ನಡೆದೆ. ಬೇಳೆ ಬೆಂದಿದೆಯೋ ಇಲ್ಲವೋ ಎಂದು ಸೌಟಿನಲ್ಲಿ ತೆಗೆದ ಬೇಳೆಯ ಕಾಳುಗಳನ್ನು ಹಿಚುಕಿ ನೋಡುತ್ತಿರುವ ತಾಯಿ ಹೇಳಿದಳು.

' ಹಂಗನಬಾರ್‍ದೊ ರಾಘು, ಲೀಲಾ ನಿನ್ನ ಕೆಲಸ ಕಾಯಂ ಆಗ್ಲಿ ಅಂತ ಮೂಕ್ಯಾಗಿ ಮಂಗಲ ಪೂಜಾ ಮಾಡತಾಳ. '

ಈ ನನ್ನ ಜೀವಂತ ಗೌರಿಯೂ ಮೌನಗೌರಿಯಾದುದನ್ನು ತಿಳಿದು ತಡೆಯಲಾರದೆ ಹೇಳಿದೆ.

' ಅವ್ವ , ನನಗ ಚಹ ಬೇಕಾಗೇದ ಈಗ. '

ಆ ದೇವತೆ ಎದುರು ಈ ಭಕ್ತ ನಂದನೆ ಏನು ಬೇಡಿಕೊಳ್ಳುತ್ತಿದ್ದಾಳೊ! ಈ ದೇವರೆನ್ನುವ ಗಂಡ ಒಂದು ಸಿಂಗಲ್ ಚಹಾಕ್ಕಾಗಿ ಬಾಯಿ ತೆಗೆದರೂ ಭಕ್ತಳು ಕಣ್ತೆರೆಯಲಿಲ್ಲ.

ಅಮ್ಮ ಮಾಡಿಕೊಟ್ಟ ಚಹದ ಸ್ಫೂರ್ತಿಯಿಂದಲೆ ಕೆಲಸ ಮುಗಿಸಿದೆ ಊಟಕ್ಕೆ ಕುಳಿತುಕೊಳ್ಳುವ ಮೊದಲೆ. ನನ್ನ ಭಾಗ್ಯ ಆ ವೇಳೆಗೆ ತನ್ನ ತಪಸ್ಸನ್ನುಮುಗಿಸಿ ಕಣ್ತೆರೆದ ಭಕ್ತಳು ತನ್ನ ಕೈಯಿಂದಲೇ ಈ ದೇವರಿಗೆ ಬಡಿಸಿದಳು.

ನನಗಂತೂ ಸಾಕಾಗಿ ಹೋಗಿದೆ ಮಹಾರಾಯ. ಇಂತಹ ಸಮಯದಲ್ಲಿ ನಿನ್ನ ಕಾಗದಗಳೇ ನನಗೆ ಚೈತನ್ಯ ನೀಡುತ್ತವೆ. ಕಾಗದಬರೆಯುತ್ತೀಯಲ್ಲವೇ ?

ನಿನ್ನವ,
ರಾಮು

೩

ಒಲವಿನ ಗೆಳೆಯ, ೨—೬—೪೫

'ನಿನ್ನ ಕಾಗದಗಳ ನನ್ನ ಜೀವಕ್ಕೆ ಚೈತನ್ಯ ನೀಡುವವು' ಎಂದು ಬರೆದಿದ್ದಿಯಲ್ಲ ಈ ನಿನ್ನ ಒಳಗಿನ ಧ್ವನಿಯ ಜತೆಗೆ ನಾನೂ ಸ್ವರ ಗೂಡಿಸುತ್ತೇನೆ ಯಾವಾಗಲೂ ತೆರೆದ ಹೃದಯದಿಂದ ಕಾಗದ ಬರೆಯುತ್ತಿರುವ ನಿನಗೆ ನನ್ನ ಕೃತಜ್ಞತೆಗಳು. ಮುಂದಕ್ಕೂ ಸಮ್ಯಾತ್ಮದ ಪ್ರತಿಬಿಂಬವಾದ ಈ ಕಾಗದಗಳು ಬೆಳೆದುಕೊಂಡು ಬಂದು ಮೊದಲಿನ ಸ್ನೇಹವನ್ನು ಚಿರಂತನವಾಗಿಡಲಿ ಎಂದು ಹಾರೈಸುತ್ತೇನೆ. ಆದರೆ ಒಂದು ವಿಚಿತ್ರ ನೋಡು. ನನ್ನ ನಿನ್ನ ಬದುಕಿನ ಗುರಿಗಳಲ್ಲಿ ಅದೆಷ್ಟು ಭಿನ್ನತೆ ಇದ್ದರೂ ನಾವು ಒಂದೇ ಆತ್ಮವನ್ನು ಹೊತ್ತುಕೊಂಡು ನಿಂತಿದ್ದೇವೆ !!

ಸಾಂಪ್ರದಾಯದಲ್ಲಿ ಮನುಷ್ಯ ಕುಣಿದಾಡುವದು ಗೊಡ್ಡುತನ ಎಂಬ ನಿನ್ನ ವಿಚಾರವನ್ನು ನಾನು ಒಪ್ಪುತ್ತೇನೆ. ಆದರೆ ರಾಘು, ತಂಗಿ ಲೀಲಮ್ಮನ ಹೃದಯದ ಭಾವನೆಯನ್ನು ನೀನು ಸರಿಯಾಗಿ ಗುರುತಿಸಿದಿಯಾ? ಮೂಢ ನಂಬಿಕೆಗಳನ್ನು ತಿದ್ದಲು ಸಾಧ್ಯ. ಆತ್ಮದಲ್ಲಿ ಕಲ್ಮಷವಿದ್ದರೆ ಕೆಟ್ಟ ಅಲ್ಲವೇ ? – ನೋಡು. ನಿನ್ನ ಪತ್ನಿಯ ಹೃದಯದಲ್ಲಿ ಎಂತಹ ವಿಶ್ವಾಸ, ಇಚ್ಛೆ, ಆಸೆ ಇದೆಯೆಂಬದನ್ನು ಗುರುತಿಸಿದಿಯಾ ? ನಿನನಗೆ ಕೆಡಕಾಗಬೇಕೆಂದು ಅವಳೇನು ಹಾರೈಸಲಿಲ್ಲ ತಾನೆ ? ನಿನ್ನ ನವಕರಿ ಕಾಯಂ ಆಗಲಿ ಎಂಬ ಸದಿಚ್ಛೆಯಿಂದ ಅವಳ ಹೃದಯದ ವಿಶಾಲಭಾವನೆಯನ್ನು ಗುರುತಿಸಲು ಕಲಿ ರಾಘು. ಅಲ್ಲಿಯೆ ಹಳ್ಳಿಯ ಸ್ತ್ರೀ ಸಮಾಜದ, ಭಾರತದ ಗತ ಸಂಸ್ಕೃತಿಯ ಭವ್ಯ ಬೆಳಕನ್ನು ಕಾಣುತ್ತಿ. ಮೂಢ ನಂಬಿಕೆಗಳನ್ನು ತಿದ್ದುವದು ನಿನ್ನಂತಹ ಸುಶಿಕ್ಷಿತನಿಗೆ, ವಿದ್ಯಾವಂತನಿಗೆ, ಅಸಾಧ್ಯವಾದ ಕಾರ್ಯವೇನೂ ಅಲ್ಲ. ಅದು ನಿನ್ನ ಪ್ರಯತ್ನದಲ್ಲಡಗಿದೆ.

ಇದ್ದಲಿಗೆ ಮಸಿ ಬುದ್ಧಿ ಹೇಳಿದ ಹಾಗೆ, ನನ್ನ ಈ ಕಾಗದ. ನನ್ನ ಮನೆಯ ಪರಸ್ಥಿತಿ ನಿನ್ನದಕ್ಕೆ ತೀರ ವಿರುದ್ಧವಾಗಿದೆ. ತಾಯಿ ಸಾವನ್ನು ಸಮೀಪಿಸಿದವಳು. ಅವಳ ಬದುಕಿನ ಆಸೆ-ಆಕಾಂಕ್ಷೆ ಎಲ್ಲ ಹಿಂಗಿ ಹೋಗಿದೆ. ಒಂದು ವಾತಾವರಣದೊಂದಿಗೆ ಹೊಂದಿಕೊಂಡು ಅರವತ್ನಾಲ್ಕು ವರುಷಗ

ಳನ್ನು ಕಳೆದ ಆ ಜೀವ ಒಂದೇ ಕ್ಷಣಕ್ಕಾಗಲಿ, ಒಂದೇ ವರುಷಕ್ಕಾಗಲಿ ಮತ್ತೊಂದು ನವೀನ ದಾರಿಯೊಂದಿಗೆ, ವಾತಾವರಣದೊಂದಿಗೆ ಹೊಂದಿಕೊಂಡು ಹೋಗಲು ಸಾಧ್ಯವಿಲ್ಲ. ಹೊಂದಿಕೊಳ್ಳಬೇಕಾದವರು ನಾವು ಯುವಕರು. ಜೀವನದಲ್ಲಿ ಹೆಜ್ಜೆ, ಹೆಜ್ಜೆಗೆ ನಮಗೆ ಕುತೂಹಲವಿದೆ, ಆಸೆಯಿದೆ, ಆಕಾಂಕ್ಷೆಯಿದೆ. ಹೊಸದರದೊಂದಿಗೆ ನಾವು ಸ್ವಲ್ಪ ಶ್ರಮವಹಿಸಿದರೂ ಹೊಂದಿಕೊಳ್ಳುತ್ತೇವೆ. ಸ್ವಲ್ಪ ತೊಂದರೆಯಾಗುತ್ತದೆ ನಿಜ. ಆದರೆ ಮುಂದಿನ ಸಮರಸ ಬದುಕಿನಲ್ಲಿ ಅದು ಮರೆತುಹೋಗುತ್ತದೆ.

ಸೀತೆಗೆ ಇಂತಹ ಸ್ವಲ್ಪಾದರೂ ತಿಳುವಳಿಕೆ, ಕಲ್ಪನೆ ಇದ್ದಿದ್ದರೆ ನನಗೆಂತಹ ಸಂತೋಷವಾಗುತ್ತಿತ್ತು ಗೊತ್ತೆ ರಾಘು ? ನನ್ನ ಬಾಳನ್ನೇ ನಾನು ಸ್ವರ್ಗವಾಗಿ ಮಾಡುತಿದ್ದೆ; ನಂದನವನವನ್ನಾಗಿ ಮಾರ್ಪಡಿಸುತ್ತಿದ್ದೆ.

ಆದರೆ ಗೆಳೆಯ, ಎಲ್ಲ ಕಲ್ಪನೆಯ ಕನಸು ! ಸೀತೆಯ ವಿಚಾರವಾಗಿ ಇಟ್ಟುಕೊಂಡ ಆಸೆ ಕೇವಲ ಕನಸು ! ಹ ಗ ಲ ಗ ನ ಸು !!

ಓಲೆ ಬರೆ.

ನಿನ್ನವ

**ರಾಮು**

●

ಆತ್ಮೀಯ ಗೆಳೆಯ,                    ೨೧—೭—೪೫

ಹಾಳು ಕೆಲಸ ಸಾಕಾಯಿತು ನನಗೆ. ಇಂದು ಯಾವದೋ ಒಂದು ಹಬ್ಬಕ್ಕಾಗಿ ನಮ್ಮ ಕಚೇರಿಗೆ ಬಿಡುವು. ಇದೇ ಸಮಯದಲ್ಲಿ ನಿನಗೆ ಕಾಗದ ಬರೆಯಬೇಕೆಂದು ಕುಳಿತರೆ ಆಗಲೆ ಯಮನ ಹಾಗೆ ಬಂದು ನಿಂತಿದ್ದಾನೆ ಎದುರಿಗೆ ಸಿರಸ್ತೇದಾರರ ಸಿಪಾಯಿ.

‘ ಯಾಕ ಬಂದಿ ನೀ ? ’

ಎಂದು ಆಶ್ಚರ್ಯದಿಂದ ಅಲ್ಲ ಮತ್ತೆ– ಮತ್ತೇನು ಬಂತಪ್ಪ ‘ಕುತ್ತು’ ಎಂದು ಹೆದರಿಯೆ ಕೇಳಿದೆ. ಆದರೆ ಅದನ್ನು ಅವನಿಗೆ ತೋರಗೊಡಲಿಲ್ಲ.

‘ ರಾವಸಾಬ್ರು ನಿಮ್ಮನ್ನ ಕರೀತಾರ ’

ಈ ಮೇಲಾಧಿಕಾರಿಗಳಿಗೆ ಹೆಂಡಿರು, ಮಕ್ಕಳು, ಪೆಚ್ಚ-ಗಿಚ್ಚ ಏನೂ ಇದ್ದ ಹಾಗಿಲ್ಲ. ಪ್ರತಿದಿನವೂ ಗಾಣದೆತ್ತಿನಂತೆ 'ಡೇಕು' ತ್ತಿರುವ ಈ ಬಡಪಾಯಿಗಳು ಹಬ್ಬದ ದಿನದಲ್ಲಾದರೂ ಸ್ವಲ್ಪ ವಿಶ್ರಾಂತಿ ಪಡೆಯಲಿ ಎಂದು ಬಿಡುವದಿಲ್ಲ ಅವರು. ಇನ್ನು ಅವರ ಸಿಪಾಯರೋ! ರಾವಸಾಹೇಬರ ಮರಿಗಳಲ್ಲವೇನು ಅವರು? ಆಫೀಸರರು ಕಾರಕೂನರಾದುದನ್ನೆ ಮರೆತರೆ ಈ ಸಿಪಾಯಿಗಳು ತಾವು ಸಿಪಾಯಿಗಳೆನ್ನುವದನ್ನೆ ಮರೆಯುತ್ತಾರೆ. ಈ 'Calling bells' ಅಂದರೆ ಏನೆಂದು ತಿಳಿದಿದ್ದಿ ನೀನು? 'ಧರಣೀವಾಚಾ' ಕೂತಾದರೂ ಇವರು ನಮ್ಮನ್ನೊಯ್ದು ಸಾಹೇಬರ ಮುಂದೆ ನಿಲ್ಲಿಸುತ್ತಾರೆ. ಆ ಸಿಪಾಯಿಯ ಉಪದ್ರವನ್ನು ತಾಳಲಾರದೆ ಈ ಕಾಗದವನ್ನು ಅರ್ಧಕ್ಕೇ ನಿಲ್ಲಿಸಿ ಸಿರಸ್ತೇದಾರರ ಮನೆಗೆ ಹೋದೆ. Weekly state ment ಕಳಿಸಲು ತಾರು ಬಂದಿತ್ತು. ಅದನ್ನಾಗಲೆ ಸಿದ್ಧಪಡಿಸಿ ನಮ್ಮ ಸಾಹೇಬರ ಸಹಿ ಮಾಡಿಸಿ ನಾನು ಕಳುಹಿಸಿದ್ದೆ ನಿನ್ನೆಯೆ. ಆದರೆ ಸಿರಸ್ತೇದಾರ ಸಾಹೇಬರಿಗೆ ಸಹಿ ಮಾಡಿದುದೆ ಮರೆತು ಹೋಗಬೇಕೆ? ಹಾಳು ಬಿಡುವಿನ ದಿವಸ ಅವರಿಂದ ಬೈಯಿಸಿಕೊಂಡು ಮನೆಗೆ ಮರಳಿದೆ. ಕಾರಣ ಮೇಲಾಧಿಕಾರಿಗಳು 'ಕತ್ತೆ' ಎಂದು ಬೈದರೂ 'ಹೌದು ಸಾಹೇಬ್ರs' ಎಂದು ಅಭಿಮಾನ ಬಿಟ್ಟು ಹೇಳದ ವಿನಹ ಇಲ್ಲಿ ನಡೆಯುವದಿಲ್ಲ. ಏನಾದರೂ ಪ್ರತಿಯಾಗಿ ಹೇಳಿದರೆ ಕೆಟ್ಟ ರಿಪೋರ್ಟ ಮಾಡುತ್ತಾರೆ ನಮ್ಮ ಮೇಲೆ. ಸಾಹೇಬರಿಂದ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡು ಮನೆಗೆ ಮರಳಿ 'ಉಸ್ಸ' ಎಂದು ಕೂಡ್ರುವದಕ್ಕೂ ನನ್ನ ಶ್ರೀಮತಿಯವರು ಚಿತ್ಕೈಸುವದಕ್ಕೂ ಸರಿಹೋಯಿತು.

'ಅತ್ತೇವ್ರಿಗೆ ಸೀರಿ ತರ್ಲ್ಯಲ್ಲ. ಹರೀಲಿಕ್ಕಗ್ಯಾವ ಅವರ ಸೀರಿ.'

ಎಂದು ಅತ್ತೆಯವರಿಗಾಗಿ ವಹಿಸಿ ಹೇಳಿದಳು. ನಗು ಬರುತ್ತದ ಈಗ. ಅವಳೆಲ್ಲಿ ನಿಂತುಕೊಂಡು ಹೇಳಿದಳು ಗೊತ್ತೇನು ನಿನಗೆ? ನಾನು ನೀನು ಜತೆಯಾಗಿ ಅಭ್ಯಸಿಸುತ್ತಿದ್ದ, ಕುಳಿತು ಕೊಳ್ಳುತ್ತಿದ್ದ ಕೋಣೆ ಇದೆಯಲ್ಲ—ಅದರ ಬಾಗಿಲಿಗೆ. ಒಳಗೆ ಬಂದು ನನ್ನೆದುರು ನಿಂತು ಹೇಳುವ ಧೈರ್ಯವೆ ಇಲ್ಲ. ಇವರ ಈ ರೀತಿಯನ್ನು ಕಂಡು ನನಗೆ ಹಳ್ಳಿಯ ಹುಡುಗಿಯರು ಗಂಡನೆಂದರೆ ಘುಂಗುವ ಪ್ರಾಣಿಗಳೆಂದು ತಿಳಿದಿದ್ದಾರೇನೊ ಎಂದು ಭಾಸವಾಗುತ್ತದೆ.

'ಲೀಲಾ ಸಂಜೀಮುಂದೆ ತರತೀನೇಳು.'

ಎಂದು ಸಿರಸ್ತೇದಾರ ಸಾಹೇಬರ ಅಪ್ಪಣೆಯಂತೆ ತಿರುಗಿ ಆ Statementನ್ನು ಸಿದ್ಧಪಡಿಸಲು ಕುಳಿತೆ ಅವಸರದಿಂದ. ಅದಕ್ಕಾಗಿ ತಲೆ ಸರಿಯಾಗಿ ಕೆಲಸ ಮಾಡಲು ಪೆಟ್ರೋಲ್ ಬೇಕಲ್ಲ. ಲೀಲೆಯನ್ನು ಮತ್ತೆ ಕರೆದೆ.

ಅವಳು ಬಾಗಿಲಿಗೆ ಬರುವದೆ ಒಂದು ಸಾಹಸ ಮಾಡಿದಂತೆ ಎಂದು ತಿಳಿದು ಕೊಂಡ ಹಾಗೆ ಕಾಣುತ್ತದೆ. ಅಂತೂ ಬಂದು ನಿಂತಳು. ಮೈತುಂಬ ಸೆರಗು ಹೊದೆದುಕೊಂಡು ನನ್ನ ಹಳ್ಳಿಯ ರಾಣಿ! ನಾನವಳ ದಿವ್ಯರೂಪವನ್ನು ಭವ್ಯ ಉಡುಪನ್ನು ನೋಡುತ್ತಿರುವಂತೆಯೆ ಮನದಲ್ಲಿ-'ಹೇ ಬ್ರಹ್ಮ—ಕೋಟ್ಯಾನುಕೋಟಿ ಇಂತಹ ಹಳ್ಳಿಯ ಹೆಂಗಸರನ್ನು ಈ ಭೂಮಿಗೆ ಕಳುಹಿಸುತ್ತಿರುವ ನಿನ್ನ ತಲೆಗೆ ಬೆಲೆಯೇ ಇಲ್ಲ!' ಎಂದುಕೊಂಡೆ—ನಿಮ್ಮ ಬ್ರಹ್ಮನನ್ನು ನೆನೆದು! ಅಷ್ಟರಲ್ಲಿಯೆ ಗಟ್ಟಿಯಾಗಿ ಹೇಳಿದಳು ನನ್ನ ರಾಣಿ.

'ನನ್ನ ಹೆಸರ ಹಿಡದ ಕರೀಬ್ಯಾಡ್ರಿ ಅಂತ ಎಷ್ಟಸರೆ ಆರ ಹೇಳೂದದು? ಮಂದಿ—ಮಕ್ಕು ಇರತಾರ. ಅತ್ತೆವ್ರು, ಮಾವನವ್ರು ಇರತಾರ. ಹೆಂಗ ತಿಳೂದುಲ್ಲೊ ಏನ ಮಣ್ಣೊ ನಿಮಗ!........'

ಅಷ್ಟು ಹೇಳಿ ಹೊರಟು ಹೋದಳು ನನ್ನ ಬಂಗಾರಿ!

ನೋಡಿದೆಯಾ ನನ್ನ ಬಾಳನ್ನು? ಹೆಂಡತಿಯ ಹೆಸರು ಹಿಡಿದು ಕರೆಯುವದು ಅಂತಹ ತಪ್ಪೆ? ಸಾಂಪ್ರದಾಯ ಇಂತಹ ವಿಚಾರದಲ್ಲೂ ತನ್ನ ಕೈಯಾಡಿಸಿ ಗಂಡನ ಅಧಿಕಾರವನ್ನು ನುಂಗಿ ನೀರು ಕುಡಿಯಬೇಕೆ? ಪುಣ್ಯಕ್ಕೆ ಹಳ್ಳಿಯ ಸಮಾಜ ನನ್ನಂತಹ ಗಂಡಂದಿರನ್ನು ಹಿಡಿದು ಫಾಶಿ ಶಿಕ್ಷೆ ವಿಧಿಸುವದಿಲ್ಲವಲ್ಲ ಅದೇ ಹೆಚ್ಚಿನದು.

ಏನೋ— ಏನೊ ನನಗೆ ಮಾತ್ರ ಈ ಎಲ್ಲ ರೀತಿ ನೀತಿ ಒಳ್ಳೇ ವಿಚಿತ್ರವಾಗಿ ತೋರುತ್ತವೆ. ನಿನಗೆ ಇಂತಹದೆಲ್ಲ ಹೇಗೆ ಹಿಡಿಯುತ್ತದೊ ನನಗೆ ತಿಳಿಯದಾಗಿದೆ.

ನಿನ್ನವ,

ರಾಘು

೪

ಗೆಳೆಯ ರಾಘು, ೩೦-೯-೪೫

ಒಕ್ಕಲತನ ಈ ಸಾರೆ ಚನ್ನಾಗಿ ನಡೆಯಿತು. ದೇವರ ದಯೆಯಿಂದ ಉತ್ಪನ್ನವೂ ಚನ್ನಾಗಿಯೆ ಬಂದಿದೆ. ತೊಂದರೆ ಏನೊ ತುಂಬ. ಬಹಳ ತ್ರಾಸಿನ ಕೆಲಸ. ಕಷ್ಟದ ಕೆಲಸ. ಅಷ್ಟೊಂದು ದುಡಿಯಲಾರದ ವಿನಹ ಏನೂ ಕೈಗೆ ಹತ್ತುವದಿಲ್ಲ. ಅಂತೂ ಮೊದಲು ವರುಷ ಸ್ವಲ್ಪಾದರೂ ಗೆಲುವಿನ ಮುಖ ಕಂಡೆ.

ಪ್ರಕೃತಿಯೊಡನೆ ಹೋರಾಡಿ ಗೆದ್ದಂತೆ ಮನೆಯೂ ಗೆಲುವಿನ ಬೀಡಾಗಿದ್ದರೆ ನನ್ನ ಕೈ ಹಿಡಿಯುವವರಾರು? ನಾನು ಎಷ್ಟು ಸಂತೋಷ ಹೆಚ್ಚಿಕೊಂಡು ನನ್ನ ಬದುಕನ್ನು ನೋಡುತ್ತಿದ್ದೆ!

ಮೊನ್ನೆ ರೈತರು "ಸೀಕ" ನ್ನು ಮನೆಗೆ ತಂದು ಹಚ್ಚಿದರು. ಅವರಿಗೆ ಹಿಂದಿನ ಕಾಲದಲ್ಲಿ ಮರ್ಯಾದೆ ಏನೋ ಸಲ್ಲುತ್ತಿತ್ತಂತೆ. ಆದರೆ ಈಗ ಅವರೂ ಬರಿಯ ಚಹಕ್ಕಿಳಿದು ಬಿಟ್ಟಿದ್ದಾರೆ. ಒಂದು ಸಿಂಗಲ್ ಚಹ ಕೊಟ್ಟು ಬಿಟ್ಟರೆ ಈಗವರಿಗೆ ಘನವಾದ ಮರ್ಯಾದೆ ಸಲ್ಲಿಸಿದ ಹಾಗೆ! ನಾನು ಚಹ ಮಾಡಲು ಹೇಳಬೇಕೆಂದು ಅಡಿಗೆ ಮನೆಗೆ ಹೋದೆ. ಅಲ್ಲಿ ತಾಯಿಯಿರಲಿಲ್ಲ. ಬಟ್ಟೆ ಒಗೆಯಲು ಕೆರೆಗೆ ಹೋಗಿದ್ದಳು. ಸೀತೆ ಸುಮ್ಮನೆ ಕುಳಿತಿದ್ದಳು ಒಬ್ಬಳೆ. ಅವಳಿಗೆ ಕೆಲಸ ಹೇಳಬಾರದೆಂದು ನಾನೆಷ್ಟೊ ಮನಸ್ಸು ಗಟ್ಟಿಮಾಡಿಕೊಂಡಿದ್ದರೂ ನನ್ನ ಬಾಯಿ ತಪ್ಪಿ ಬಂದು ಹೋಯಿತು ಆ ಮಾತು. ಮನೆ ಎಂದ ಮೇಲೆ ಏನಾದರೂ ಹೇಳಲೇಬೇಕಾಗುತ್ತದೆ.

'ರೈತರ ಬಂದಾರ ಅವ್ವ ಮನ್ಯಾಗಿಲ್ಲ. ನೀ ಅಷ್ಟ ಚಹಾ ಮಾಡ ಸೀತಾ.' 'ಇಷ್ಟ ಮಂದಿಗೆಲ್ಲ ಚಹ-ಕಾಫಿ ಮಾಡಲಿಕ್ಕಂತಃ ನನ್ನ ಇಲ್ಲಿಗೆ ಕರಕೊಂಡಬಂದ್ರೇನು?'

ಪ್ರೇಮ ವಿವಾಹದ ಹಣೆಯ ಬರಹ ಇದು. ನಗರದ ಹೆಣ್ಣನ್ನು ಕೈಹಿಡಿದದ್ದರ ಪ್ರಸಾದ ಇದು! ಅವಳಿಗೆ ತಿರುಗಿ ನಾನು ಏನನ್ನೂ ಹೇಳಲಿಲ್ಲ. ರೈತರಿಗೆ ಹಣಕೊಟ್ಟು ಹಳ್ಳಿಯ ಹೋಟಲೊಂದರಲ್ಲಿ ಚಹ ಕುಡಿದು ಬರಲು ತುಂಬಿ ಬಂದ ನಿರಾಶೆಯಲ್ಲಿ ಕಳುಹಿಸಬೇಕಾಯಿತು. ಹೀಗೆ ಎಂದೂ ನಮ ಮನೆಯಲ್ಲಾಗಿರಲಿಲ್ಲ ಗೆಳೆಯ.

ಸುಖವಾಗಿದ್ದೀಯಾ?

ನಾನು ಈ ಹಳ್ಳಿಯಲ್ಲೂ ನನ್ನ ಸೀತೆಯ ಹೆಸರು ಹಿಡಿದು ಕರೆಯುವ ಸಾಹಸ ಮಾಡಿದ್ದೇನೆ. ತಾಯಿ ಏನೊ- 'ಈಗಿನ ಕಾಲದ ಹುಡುಗ್ರು' ಎಂದು ಸುಮ್ಮನಿದ್ದಾಳೆ. ಆದರೆ ಹಳ್ಳಿಯಜನರಿಗೆ ಮಾತ್ರ ಅದೇ ಒಂದು ಮೋಜಾಗಿದೆ. ಹಳ್ಳಿಯ ಜನರನ್ನು ಕಂಡರೆ, ಅವರ ರೀತಿ–ನೀತಿಗಳನ್ನು ನೋಡಿದರೆ ನೀನು ನಗುವ ಹಾಗೆಯೆ ಅವರೂ ನಮ್ಮ ಈ ಹೊಸ ಪದ್ಧತಿಗಳನ್ನು ಕಂಡು ನಗುತ್ತಾರೆ. ಅದಕ್ಕಾಗಿ ನನಗೆ ಹೆದರಿಕೆಯಿಲ್ಲ. ನಾನು ಯಾರಿಗೂ ಇಂತಹ ವಿಚಾರದಲ್ಲಿ ಹೆದರುವದಿಲ್ಲ. ಒಂದು ವ್ಯಥೆ ಮಾತ್ರ ನೋಡು, ನಾನು ಇಂದಿಗೂ ಭಗವಂತನಲ್ಲಿ ಮೊರೆಯಿಡುತ್ತೇನೆ— 'ನನ್ನವಳಿಗೆ ಸರಿಯಾದ ತಿಳುವಳಿಕೆ ನೀಡಿ ನಮ್ಮನ್ನೊಂದು ಪಥಕ್ಕೆ ಹಚ್ಚು' ಎಂದು ಆ ಕಾಲ ಬರುವದೆ ದೊ ನನಗೆ ಮಾತ್ರ ತಿಳಿಯದಾಗಿದೆ.

ನಿನ್ನವ,

**ರಾಮು**



ಆತ್ಮೀಯ ಗೆಳೆಯ, ೨೮–೧೦–೪೫

ಓ, ಈಗ ನನಗೆ ನಾಲ್ಕು ದಿನಗಳ ಹಿಂದೆ ನವಕರಿ ಕಾಯಂ ಆದ ಆರ್ಡರು ಬಂತು. "ಗೋಪಾಳ" ವಿಲ್ಲದೆ ಈ ಕೆಲಸವಾಗದಿದ್ದರೂ ಇಂದಿನ ದಿನ ಮಾನದಲ್ಲಿ– ಜಾತಿಯ ಮೇಲೆ ನವಕರಿ ಕೊಡುವ ಈ ಹುಚ್ಚು ಕಾಲದಲ್ಲಿ ನನ್ನಂತಹನಿಗೆ ನವಕರಿ ಕಾಯಂ ಆದದ್ದು ಹೆಚ್ಚಿನ ಮಾತಲ್ಲವೆ? ಈ ಸಂತೋಷಕ್ಕಾಗಿ ನಿನಗೆ ಪೋಸ್ಟಿನ ಮೂಲಕ Sweet meats ಕಳುಹಿದ್ದೇನೆ.

ನಿನ್ನೆ ಆ ಸಂತೋಷಕ್ಕಾಗಿಯೆ ನನ್ನ ಗೆಳೆಯರಿಗೆ, ಮೇಲಾಧಿಕಾರಿಗಳಿಗೆ, ಜತೆಗಾರರಿಗೆ ದೊಡ್ಡ ಫೀಸ್ಟನ್ನೇರ್ಪಡಿಸಿದ್ದೆ. ಅಡಿಗೆಯವನೆ ಎಲ್ಲವನ್ನೂ ಸಿದ್ಧಪಡಿಸಿದ್ದ. ಅದಕ್ಕಾಗಿಯೆಂದೆ ಬಾಡಿಗೆಗೆ ಕೊಡುತ್ತಿದ್ದ ನಮ್ಮ ಪಕ್ಕದ ಮನೆಯನ್ನು ತೆರವಿಟ್ಟಿದ್ದೆ. ಮನೆಯಲ್ಲಿ ಇಂತಹ ಯಾವದನ್ನೂ ಏರ್ಪಡಿಸಲು ಸಾಧ್ಯವಿಲ್ಲ. ಆ ದೃಶ್ಯಗಳನ್ನು ನೋಡುವದೂ ಅಸಾಧ್ಯ ಯಾಕಂ

ತಿಯಾ? ಇದು ರೇಪ್ಷಿನ್ಸ್ಯ ಖಾತೆ, ಕುಡಿಯುವದು, ತಿನ್ನುವದು, ಆಡುವದು ಈ ಮೂರರಲ್ಲಿ ಯಾವನು ಬಲ್ಲಿದನೊ ಅವನೆ ಈ ಖಾತೆಯಲ್ಲಿ ಬಾಳುತ್ತಾನೆ. ಎಂತಹ ಸಂಭಾವಿತ ಮನಸ್ಯನೂ ಈ ಖಾತೆಗೆ ಸೇರಿದ ಮೂರು ನಾಲ್ಕು ತಿಂಗಳುಗಳಲ್ಲಿ ಈ ಮೂರು ಗುಣಗಳನ್ನ ರಗಿಸಿಕೊಳ್ಳುತ್ತಾನೆ. ಇಲ್ಲವೆ ಬೇಸತ್ತು ನವಕರಿಗೆ ಕೈಮುಗಿದು ಓಡಿ ಹೋಗುತ್ತಾನೆ.

ನನಗಂತೂ ಈ ಮೂರೂ ಸರ್ಟಿಫಿಕೆಟ್ಟುಗಳು ದೊರೆತುಬಿಟ್ಟಿವೆ. ಇನ್ನೇನೂ ಹೆದರಿಕೆಯಿಲ್ಲ. ಆದರೆ ಒಂದು ವಿಚಾರ ಮಾತ್ರ ನನ್ನನ್ನು ತುಂಬ ಕಾಡುತಿತ್ತು. ಅಕಸ್ಮಾತ್ತಾಗಿ ಬಂದ ಅತಿಥಿಗಳ ಕಣ್ಣಿಗೆ ನನ್ನ ಲೀಲೆ ಬಿದ್ದರೆ ಅವರೆಲ್ಲ ನನ್ನನ್ನ ಪಹಾಸ್ಯ ಮಾಡದೆ ಬಿಡಲಾರರು ಎಂದು. ಅದ ಕ್ಕಾಗಿಯೆ ಲೀಲೆಗೆ ವೈನಾಸ ಬಟ್ಟುಕೊಂಡು ಆ ಬನಾರಸಿ ಪತ್ತಲ ಉಟ್ಟು ಕೊಳ್ಳಲು ಹೇಳಿದೆ. ಅವಳು ತಿರುಗಿ ಏನು ಹೇಳಿದಳು ಗೊತ್ತೆ ?

‘ ಅಯ್ಯ, ಇವತ್ತೇನ ಹಬ್ಬರಿ —ಹುಣ್ಣೆವ್ಯಾರಿ ಸುಮ ಸುಮ್ನ ಗೊಂಬಿ ಹಾಂಗ ಉಟಗೊಂಡ ಕೂಡೋದೇನ್ರಿ ? ಹಬ್ಬದಾಗುಟ್ರ ಚಂದ್ರಿ, ಚಾರ, ಆದೆಲ್ಲ ಬಿಟ್ಟ ಈಗೇನ ಉಡೂದದು ಅಸಹ್ಯರಿ ? ’

ಇದವಳ ಪಲ್ಲವಿ. ಇದನ್ನೇ ಕೇಳಿ, ಕೇಳಿ ನನಗೂ ಎಲ್ಲಿ ರೂಢಿಯಾಗು ವದೋ ಎಂದು ಹೆದರಿಕೆ ನನಗೆ. ನಾನೊಂದು ಸಲ ಗಂಡನ ಅಧಿಕಾರ ಶಕ್ತಿಯನ್ನೆಲ್ಲ ಒಂದುಗೂಡಿಸಿ ಹೇಳಿದೆ.

‘ ಅಲ್ಲ ಲೀಲಿ, ನನ್ನ ನವಕರಿ ಇಂತಾ ಕಾಲದಾಗ ಕಾಯಂ ಆತಲ್ಲರಿ ಇದ್ರಿ ಹಬ್ಬಲ್ಲೇನು ? ’

‘ ಹಬ್ಬ ಹೌದು. ಆದ್ರ ದೇವರ ಹಬ್ಬಲ್ಲಲ್ಲರಿ ! ’

‘ ನಾನರಿ ನಿನ್ನ ದೇವ್ರಲ್ಲರಿ ? ’

‘ ಹೋಗ್ರಿರಿ....ನಿಮ್ಮದೋಳೇ ಹೆಚ್ಚಿಂದು.

ಥೂ—ಈ ಹಳ್ಳಿಯ ಹುಡಿಗಿಯರಿಗೆ ನಾಚಿಕೆಯೆಂದರೆ ಮೂಗಿನ ಮೇಲೆಯೇ. ಮತ್ತೊಂದು ಕ್ಷಣದಲ್ಲಿ ಅವಳು ಓಡಿಹೋಗಿದ್ದಳು. ತಿರುಗಿ ಬರಲಿಲ್ಲ. ಮನೆಯಲ್ಲೆಲ್ಲ ಹುಡುಕಾಡಿದರೂ ಅವಳು ಕಣ್ಣಿಗೆ ಬೀಳಲಿಲ್ಲ. ಏನು ಮಾಡುವದು. ಮಹಾರಾಯ. ಬಂದ ಸಿಟ್ಟನ್ನೆಲ್ಲ ಒಳಗೆಯೆ ನುಂಗಿಕೊಂಡೆ.

ಫೀಸ್ಟಿಗೆ ನಮ್ಮ ಸಾಹೇಬರು, ಜತೆಯ ಕಾರಕೂನರು ಎಲ್ಲರೂ ಬಂದಿದ್ದರು. ನನ್ನ ಸಂಗಡ ಗುಮಾಸ್ತಳಾಗಿರುವ Miss ಪ್ರೇಮ ಪಾಟೀಲ ನನ್ನವಳನ್ನು ಕಂಡು ಬರಲು ಹೋಗಿದ್ದಳು. ಮೃಗಾಲಯದಲ್ಲಿಯ ಕರಡಿಯಂತಹ ನನ್ನ ಲೀಲೆಯನ್ನು ಕಂಡು ಅವಳೇನು ತಿಳಿದುಕೊಂಡಳೋ! ಲೀಲೆಯ ವೇಷ, ಭೂಷಣ—ಅವಳು ಮಾತನಾಡುವ ಭಾಷೆಯನ್ನು ಕಂಡು ಒಳಗೊಳಗೆಯೆ ನಕ್ಕಿರಬೇಕು. ದಾಕ್ಷಿಣ್ಯಕ್ಕೆ ನನ್ನೆದುರು ಬಹಿರಂಗ ಪಡಿಸಲಿಲ್ಲ ಅಷ್ಟೆ!

ಕುಡಿಯುವದು, ತಿನ್ನುವದು, ಆಡುವದು ಜತೆಗೆ ಸಾನಿಯೊಬ್ಬಳ ಸಂಗೀತದೊಂದಿಗೆ ನಿನ್ನೆಯ ಫೀಸ್ಟು ಮುಗಿಯಿತು.

ನನ್ನ ಹುಡಿಗೆಯನ್ನು ಸಂಪೂರ್ಣವಾಗಿ ನಗರದವಳನ್ನಾಗಿ ಮಾಡಬೇಕೆನ್ನುವ ಪ್ರಯತ್ನಗಳೆಲ್ಲ ಮುಗಿದು ನಿರಾಸೆಯ ಜೋಕಾಲೆಯಲ್ಲಿ ತೂಗಾಡುತ್ತಿದೆ ನನ್ನ ಮನ.

ನಿನ್ನ ಪ್ರೇಮ ವಿವಾಹದ ಹಣೆಯ ಬರಹ ಅದಾದರೆ ನನ್ನ ಹಿರಿಯರ ಮದುವೆಯ ಒತ್ತಾಯದ ಹಣೆಯ ಬರಹ ಇದು. ಅಂತೂ ಜೀವನದಲ್ಲಿ ನಮಗೇನೂ ನೆಮ್ಮದಿಯಿದ್ದಂತಿಲ್ಲ.

ನಿನ್ನ
**ರಾಘು,**

**೫**

ಗೆಳೆಯ ರಾಘು, ೧೩—೧೧—೪೫

ನೀನು ಕಳುಹಿಸಿದ Sweet meats ಹಾಗು ನಿನ್ನ ಕಾಗದ ಬಂದು ತಲುಪಿದವು. ನಿನ್ನ ನವಕರಿ ಕಾಯಂ ಆದದ್ದನ್ನು ಓದಿ ಸಂತೋಷವಾಯಿತು. ನಿನ್ನ ಭಾಗ್ಯ ಹೆಚ್ಚಿದಷ್ಟೂ ಈ ನಿನ್ನ ಹಳ್ಳಿಯ ಗೆಳೆಯನಿಗೆ ಆನಂದವೆ? ನಿನ್ನ ಬದುಕು ಹಿರಿದಾಗಿ ಬೆಳಗಲಿ ಎಂದು ಹೃದಯ ತುಂಬಿ ಹಾರೈಸುತ್ತೇನೆ. ಭಗವಂತನನ್ನು ಪ್ರಾರ್ಥಿಸುತ್ತೇನೆ.

ತಂಗಿ ಲೀಲಮ್ಮನನ್ನು ನೀನು ಒಂದೇ ಕ್ಷಣಕ್ಕ ತಿದ್ದಲೆತ್ನಿಸಿ ನಿರಾಸೆಗೊಂಡ ಹಾಗೆ ತೋರುತ್ತದೆ. ಅವಳಂತೆಯೆ ನಡೆದು ಅವಳನ್ನು ದಾರಿಗೆ

ತರಲೆತ್ನಿಸಿದರೆ ನಿನ್ನ ದಾಂಪತ್ಯ ಸರಿಯಾದ ಮಾರ್ಗ ಹಿಡಿಯಬಹುದೆನ್ನಿಸು ತ್ತದೆ. ನೀನು ತಿಳಿದುಕೊಂಡ ಹಾಗೆ ಹಳ್ಳಿಯ ಹೆಣ್ಣು ಕೇವಲ ಮೃಗಾಲಯದಲ್ಲಿಯ ಕರಡಿಯೂ ಅಲ್ಲ; ಹುಲಿಯೂ ಅಲ್ಲ. ಸಹನೆ, ತ್ಯಾಗಗಳು ಅವರ ರಕ್ತಗತವಾಗಿ ಬಂದ ಹಿರಿಯ ಗುಣಗಳು. ಅಂತಹ ದಿವ್ಯಭೂಮಿಯಲ್ಲಿ ನೀನು ಬಿತ್ತಿದಂತೆ ಬೆಳೆ ಬರುತ್ತದೆ. ಆದರೆ ಕಳೆ, ಕಸ, ನಟ್ಟುಗಳನ್ನು ತೆಗೆಯದೆ ಒಮ್ಮೆಲೆ ಬಿತ್ತಿಗೆಗೆ ನಿಂತರೆ ಎಂತಹ ಭೂಮಿಯೂ ಸರಿಯಾಗಿ ಬೆಳೆಯಲಾರದು. ಹಾಗೆಯೆ ತಂಗಿ ಲೀಲಳ ಬದುಕೂ ಬೆಳಗಲಾರದು. ತಾಳ್ಮೆಯಿಂದ ನೀನು ಮೊದಲು ಹೊಲ ಹಸನ ಮಾಡುವ ಕಾರ್ಯಕ್ಕೆ ತೊಡಗು. ನಾನೇನೋ ಹಾಗೆ ಪ್ರಯತ್ನ ಮಾಡುತ್ತಲಿದ್ದೇನೆ. ಆದರೆ ಭೂಮಿಯೆ ಸರಿಯಾಗಿರದ 'ಗುಡ್ಡದ ಕೆಳಗಿ'ನ ಹೊಲವನ್ನು ಬಿತ್ತುವ ಹಾಗೆ ಬಿತ್ತಿಗೆಗೆ ನಿಂತಿದ್ದೇನೇನೊ ಎನ್ನಿಸುತ್ತದೆ.

ಈಗ ನಾಲ್ಕು ದಿನಗಳ ಹಿಂದೆ ನಿನ್ನಂತಹದೆ ಸಮಾರಂಭ ಇಲ್ಲಿಯೂ ನಡೆಯಿತು. ನಮ್ಮ ಹಿರಿಯ ರೈತ ಭರಮ ತನ್ನ ಕಡೆಯ ಮಗಳ ಮದುವೆ ಮಾಡಿದ. ನಾವು ಆ ಸಮಾರಂಭಕ್ಕೆ ಹೋಗಬೇಕಾದದ್ದು ನ್ಯಾಯವಲ್ಲವೆ ? ಅವನಿಗೆ ನಮ್ಮ ಮೇಲೆ ಹೇಳತೀರದಷ್ಟು ವಿಶ್ವಾಸ. ನಮ್ಮ ಎರಡು ಹೊಲಗಳನ್ನು ತಲೆತಲಾಂತರದಿಂದ ಅವನ ಮನೆಯವರು ಮಾಡುತ್ತ ಬಂದಿದ್ದಾರೆ. ನಮ್ಮ ಅವರಲ್ಲಿ ಅಂತಹ ಸ್ನೇಹ, ವಿಶ್ವಾಸ. ಹೊರಗಿನಿಂದ ನೋಡುವವರಿಗಂತೂ ನಾವು ಒಂದು ಮನೆಯವರೇನೋ ಎಂದು ಸಂಶಯ ಬರುತ್ತದೆ. ರಾತ್ರಿ ಭರಮ, ಅವನ ಹಿರಿಯ ಮಗ ರಂಗ, ಅವನ ಪತ್ನಿ ಭರಮವ್ವ ಎಲ್ಲರೂ ಮನೆಗೆ ಬಂದು ನಮ್ಮನ್ನೆಲ್ಲ ಮುಂದೆ ಕುಳ್ಳಿರಿಸಿಕೊಂಡು ಹೇಳಿದರು.

'ಕಡೀ ಮಗಳ ಲಗ್ನ ಹಡದಪ್ಪಾ ನೀವು ಅಕ್ಕಿಕಾಳ್ಗೆ ಬರಾಕಾಬೇಕು. ಅವ್ವಾವ್ರು, ಬಂದ್ಹಾ ಬರತಾರು. ಅವರ ಹರಿಕೇಲಿದ್ದ ಈಟೆಲ್ಲ ಮಕ್ಳ ಮದಿವ್ಯಾತೆಪ್ಪಾ. ನೀವೂ ಈಸರೇಕ ಅದೀರಿ. ಹಿಂದ್ಕ ನೀವ ಕಲಿವ್ಯಾಕ ಹ್ವಾದಾಗ ಎಲ್ಲಾರ ಮದಿವ್ಯಾತ ನನ್ ತಂದೆ. ಈ ಮದಿವಿಗ್ಯಾರ ಬಂದ ಅಳಿಯ, ಮಗಳಿಗೆ ಅಕ್ಕಿಕಾಳಾ ಹಾಕಿ ಹೋಗ್ರೆಪ್ಪಾ– ಸಣ್ಣ ಅವ್ವಾವ್ರ ಕೂಡ್ಸೆ ಬಂದು.'

ಎಂದು ಹೇಳಿಕೊಂಡು ಹೋದ ಭರಮ. ಆ ಮದುವೆಗೆ ಸೀತೆಯ ಸಂಗಡ ಹೋಗಬೇಕಾದದ್ದು ನ್ಯಾಯವಲ್ಲವೆ ? ಮರುದಿನ ಮುಂಜಾವು ಅಕ್ಕಿಕಾಳು. ತಾಯಿ ಹೊರಟು ನಿಂತಳು.

' ಬಾ, ಸೀತಾ ಹೋಗೂಣ. '

ಎಂದು ಕರೆದರೆ ಅವಳು ತುಟಿ ಬಿಚ್ಚಿ ಒಂದು ಮಾತನ್ನೂ ಆಡಬಾರದೆ? ನಾನೂ ಹೇಳಿದೆ.

' ಹಳ್ಳಿಯ ಮುಗ್ಧ ಮಂದೀ ವ್ಯಾಲೆ ವಿಶ್ವಾಸ ಇಡೂದಂದ್ರ- ದೇವರ ವ್ಯಾಲೆ ಇಟ್ಟ ವಿಶ್ವಾಸಕ್ಕಿಂತ ಹೆಚ್ಚಿರತ್ತದ. ಇಲ್ಲಂದ್ರ ಅವರು ಮುಂದಿದ್ರೂ ಮಾತಾಡಸೂದುಲ್ಲ. '

'ಅಂತ ದರಿದ್ರ ಮಂದೀ ಮನಿ ಅಕ್ಕಿಕಾಳಿಗೆ ನಾ ಬರೂದಿಲ್ಲ. ಏನಾದ್ರು ಬರೂದಿಲ್ಲ.'

ಎಂದು ಹಟದಿಂದ ಹೇಳಿದಳು ಸೀತೆ. ಸಾಗಲಿ ಈ ಸಂಪು ಎಂದು ಕೊಂಡು ತಾಯಿಯ ಸಂಗಡ ಮದುವೆಗೆ ಹೋದೆ. ಅವಳು ಬರಲಿಲ್ಲವೆಂದು ಭರಮ, ಅವನ ಮನೆಯವರು ಬಹಳ ಹಳಹಳಿಸಿದರು. ಒಂದು ಸಾರೆ ಭರ ಮನ ಹಿರಿಯ ಸೊಸಿ ರಂಗಿ ಹೋಗಿ ಕರೆದು ಬಂದಳಂತೆ; ಬರುವ ಮನ್ಸಿ ದ್ದರೆ–ಎಲ್ಲರನ್ನು ಒಂದೇ ಸ್ನೇಹ, ವಿಶ್ವಾಸದಿಂದ ಕಾಣುತ್ತಿದ್ದರೆ ಆ ಮಾತ ಲ್ಲವೆ ?–ಇದು ನಗರದ ಜೀವನದ ದುಷ್ಪರಿಣಾಮ ಎನ್ನಿಸುತ್ತದೆ ನನಗೆ, ಅಲ್ಲಿ ಒಂಟಿಯಾಗಿ ಕಳೆದ ಬದುಕು ಇಲ್ಲಿ ಸಮಾಜದೊಂದಿಗೆ, ಜನತೆಯೊಂದಿಗೆ ಹೊಂದಿಕೊಳ್ಳಬೇಕಾಗುತ್ತದೆ.

ಬಿಡಿ ಕುಟುಂಬಕ್ಕಿಂತ 'ವಸುದೈವ' ಕುಟುಂಬಕ್ಕೆ ಇಲ್ಲಿ ಹೆಚ್ಚು ಬೆಲೆ ಯಿದೆ. ಹಾಗಿಲ್ಲದೆ ಹೋದರೆ ಯಾರೂ ಇಲ್ಲಿ ನಮ್ಮನ್ನು ಮಾತನಾಡಿಸು ವುದಿಲ್ಲ.

ನಿನಗೆ ಬಿಡುವಾದರೆ ಇಲ್ಲಿಗೆ ಬರಬಾರದೆ ?

ನಿನ್ನವ,

**ರಾಮು**

ಗೆಳೆಯ ೧—೧೨—೪೫

ಈಗ ಮೂರು ದಿನಗಳ ಹಿಂದೆ ಚಲಚಿತ್ರ ನೋಡಲು ಹೋಗಿದ್ದೆ. ಹಳ್ಳಿಯ ಹುಡಿಗಿಯ ಪೆದ್ದತನವನ್ನು ಎತ್ತಿ ತೋರಿಸುವ ಆ ಚಿತ್ರ ನನ್ನ ಮನಸ್ಸನ್ನು ತುಂಬ ಸೆರೆಹಿಡಿಯಿತು. ಹಳ್ಳಿಯ ಹುಡುಗಿಯ ಸಂಗಡ ಮೊದಲೆ ಹಿರಿಯರ ಒತ್ತಾಯಕ್ಕೆ ಲಗ್ನವಾಗುತ್ತದೆ. ಅವನು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಇಂಗ್ಲಂಡಿಗೆ ಹೋಗಿ ತಿರುಗಿ ಬಂದ ಮೇಲೆ ಅವನಿಗೂ, ಅವಳಿಗೂ ಸರಿ ಹೊಂದುವದಿಲ್ಲ. ಸಂಸಾರದಲ್ಲಿ ಅತಿಶಯ ಬೇಸರ ಬಂದು ಕೊನೆಗೆ ನಾಯಕ ಅವಳನ್ನು ತವರು ಮನೆಗೋಡಿಸಿ ತನ್ನನ್ನು ಪ್ರೀತಿಸುವ ನಗರದ ಹುಡುಗಿಯ ಸಂಗಡ ಮದುವೆಯಾಗುತ್ತಾನೆ. ಸಂಸಾರದ ಸುಖ ಸಂತೋಷದಲ್ಲಿ ಮುಕ್ತಾಯವಾಗುವ ಆ ಚಿತ್ರದ ಕೊನೆಗೆ ನಾಯಕ ಅಮರ ಸಂದೇಶ ನೀಡುತ್ತಾನೆ. ತನ್ನ ಸುಭವವನ್ನೆ ಬಿಚ್ಚುಮನಸ್ಸಿನಿಂದ ಹೇಳುತ್ತಾನೆ. — 'ನಾಗರಿಕರಾದವರು ಎಂದೂ ಇಂತಹ ಹಳ್ಳಿಯ ಹುಡುಗಿಯ ಕೈ ಹಿಡಿಯ ಬೇಡಿ; ಕೈಹಿಡಿದರೆ ನನ್ನಂತೆ ನೀವೂ ಕಷ್ಟವನ್ನನುಭೋಗಿಸ ಬೇಕಾಗತ್ತದೆ. ನಗರದ ಹೆಣ್ಣನ್ನು ಕೈಹಿಡಿದ ನನ್ನ ಸಂಸಾರ ಎಷ್ಟು ಸುಂದರವಾಗಿದೆ!' ಎಂದು ಹೇಳುವ ನಾಯಕನ ಪೂರ್ಣಾನುಭವ ಎಷ್ಟು ಸತ್ಯವಾಗಿದೆ!

ಲೀಲೆ ನನ್ನ ಸಂಗಡ ಚಿತ್ರ ನೋಡುವದಕ್ಕೆ ಹೋಗಲಿ, ಪಾರ್ಕಗೆ ಬರುದಕ್ಕಿರಲಿ ಹಗಲು ಹೊತ್ತು ನನ್ನ ಸಂಗಡ ಮಾತನಾಡಿದರೆ ಯಾರಾದರೂ ನೋಡಿಯಾರೆಂದು ಹೆದರುವ ಅವಳು ಸಮೀಪಕ್ಕೂ ಸುಳಿಯುವದಿಲ್ಲ. ಪುರಾಣ ಯುಗದ ಯಾವದಾದರೂ ಚಿತ್ರಬಂದರೆ ಅತ್ತೆ-ನೊಸೆ ಜತೆಯಾಗಿ ಆಳಿನ ಸಂಗಡ ಹೋಗಿ ಬರುತ್ತಾರೆ. ನನ್ನ ಸಂಗಡ ಮಾತ್ರ ವಿಲಿವಿಲಿ ಒದ್ದಾಡಿದರೂ ಬರುವದಿಲ್ಲ. ಇಂತಹ ಲೀಲೆಗೇ 'ಹಳ್ಳಿಯ ಹುಡುಗಿ' ಚಿತ್ರ ತೋರಿಸಬೇಕೆಂದು ನನಗೆ ಹಟ ಹೊಕ್ಕುಬಿಟ್ಟಿತು. ಬಂದರಲ್ಲವೆ ನನ್ನ ಸಂಗಡ ?

'ಯಾ ಚಿತ್ರ ? '

ಎಂದು ಕೇಳಿದಳು.

' ಹಳ್ಳಿಯ ಹುಡುಗಿ !

' ಪಿಸ್ ! ಅದೇನದ ಅದರಾಗ್ಳ ? ಒಂದ ದೇವರ ಕತಿ ಅಲ್ಲ, ಧಿಂಡರ ಕತಿ ಅಲ್ಲ. ಸುಮ ಸುಮ್ನ ರೊಕ್ಕ ಹಾಳು !

‘ಎಲ್ಲಾ ಹಾಳಾಗಲಿ. ಆದ್ರ ಆ ಚಿತ್ರs ನೋಡಲಿಕ್ಕೆ ಮಾತ್ರ ಹೋಗೋಣ.’

‘ಎಲ್ಲಾ ಹಾಳಾಪ್ರ ನಾಳೆ ಹೊಟ್ಟೆಗೇನ ಕೇರ ಬಡಕೊಂಬೂದದ ಏನು? ನಾ ಏನ ಸಾಪ-ಸಾಪ ಬರೂದುಲ್ಲ.’

‘ನಾ ಸಾಪ-ಸಾಪ ಬಿಡೂದುಲ್ಲ.’

‘ಏನ ಮಾಡತೀರೋ ಮಾಡ್ರಿ. ಆದ್ರ ನಾ ಬರೂದುಲ್ಲ. ಏನಾದ್ರೂ ಬರೂದುಲ್ಲ.’

ಎಂದು ಹಟ ಹಿಡಿದು ಬಿಟ್ಟಳು. ನಾನು ಪ್ರತಿಯಾಗಿ ಸಂಪು ಹೂಡಿದೆ ಫಲಿಸಲಿಲ್ಲ. ಕೊನೆಗೆ ಚಿತ್ರ ನಮ್ಮೂರಿನಿಂದ ಹೊರಟುಹೋಯಿತು. ಅವಳೇನೂ ಚಿತ್ರಕ್ಕೆ ಬರಲಿಲ್ಲ. ಸಹಕಾರವಿಲ್ಲದ ಇಂತಹ ಮಡದಿಯ ರೊಂದಿಗೆ ಬಾಳುವದು ಕಷ್ಟ ಎನ್ನಿಸಿ ಬಿಟ್ಟಿದೆ. ಇವಳ ಬದುಕಿನ ಹೊಲದಲ್ಲಿ ಯಾವ ರಸವಿದೆಯೆಂದು ಕಸವನ್ನು ತೆಗೆಯುವದು?

ನಿನ್ನ ಮಡದಿ ಹಳ್ಳಿಯ ಜನರೊಂದಿಗೆ ಬೆರೆಯುವದಿಲ್ಲ ಎಂದಿದ್ದೀ-ಯಲ್ಲ; ಇಂತಹ ಹಳ್ಳಿಯ ಜನರೊಂದಿಗೆ ಸುಶಿಕ್ಷಿತ, ಸುಸಂಸ್ಕೃತ ಸ್ತ್ರೀ ಹೇಗೆ ಬೆರೆತಾಳು, ನೀನೇ ಯೋಚಿಸು. ನನ್ನನ್ನು ಕೇಳಿದರೆ ನೀನು ಆ ಹಳ್ಳಿಯನ್ನೇ ಬಿಟ್ಟು ಬರುವದು ಕ್ಷೇಮ ಎನ್ನಿಸುತ್ತದೆ. ಅಲ್ಲೇನಿದೆ ಮಣ್ಣು? ಬರಿಯ ಲೀಲೆಯಂತಹ ಅಜ್ಞಾನಿಗಳ ತಂಡದಲ್ಲಿ ಸುಶಿಕ್ಷಿತನಾದ ನೀನು ತೊಂದರೆಯನ್ನನುಭವಿಸುತ್ತಿರಬಹುದು. ಸೋದರಿ ಸೀತಮ್ಮ ಹೇಳಿದ ಹಾಗೆ ಇಲ್ಲಿ ಬಂದು ಆರಾಮವಾಗಿರಬಾರದೆ?

ನಿನ್ನವ,

**ರಾಘು,**

**೬**

ಪ್ರಿಯ ಗೆಳೆಯ, ೧೮–೨–೪೬

ನಿನ್ನ ಕಾಗದ ಕೈಸೇರಿತು. ಓದಿದಾಗ ನನಗೆ ಹೇಳತೀರದಷ್ಟು ಆಶ್ಚ ರ್ಯವಾಯಿತು. ಸೀತೆಯ ಸ್ವರಕ್ಕೆ ‘ಸೋ’ ಎನ್ನಲು ಮಾತ್ರ ನನ್ನಿಂದ ಸಾಧ್ಯವಿಲ್ಲ. ಸತ್ಯವಾಗಿ ನಾನು ಹಳ್ಳಿಯಲ್ಲಿಯೆ ಹುಟ್ಟಿ ಬಾಲ್ಯದ ಅರ್ಧ

ಭಾಗವನ್ನು ಕಳೆದವನು. ಹಳ್ಳಿಯ ಹಾಲಿನಿಂದ, ಅನ್ನದಿಂದ ಬೆಳೆದವನು. ಹಳ್ಳಿಯೆ ಭಾಷೆಯೆ ಮೊದಲು ನಾನಾಡಲು ಕಲಿತ ಭಾಷೆ, ಹಳ್ಳಿ ನನಗೆಂದೂ ಬೇಸರಬರಿಸಿಲ್ಲ; ಮುಂದೆಯೂ ಬರಿಸಲಾರದು. ನನ್ನ ನಿರ್ಧಾರವನ್ನು ನಾನೆಂದೂ ಬದಲಿಸಲಾರೆ. ಇಲ್ಲಿ ನನಗೆ ನಿಜವಾದ ಜ್ಞಾನ, ಬೆಳಕು ದೊರೆಯುತ್ತದೆ. ಅದು ಪಟ್ಟಣಗಳ ಹಾಗೆ ಕೃತಕ, ಅಸಹ್ಯವಾಗಿರುವದಿಲ್ಲ. ನೋಡುವ ಕಣ್ಣೊಂದು ವಿಶಾಲವಾಗಿದ್ದರೆ, ತಿಳಿಯುವ ಹೃದಯವೊಂದು ತೆರವಿದ್ದರೆ ಇಲ್ಲಿ ಅರಿತುಕೊಳ್ಳಬೇಕಾದುದು ಅರಗಿಸಿಕೊಳ್ಳಬೇಕಾದುದು ತುಂಬ ಇದೆ. ಭಾರತದ ಪುರಾತನ ಸಂಸ್ಕೃತಿಯ ಎಲ್ಲ ಗುರುತುಗಳನ್ನೂ ಕಾಣಬಹುದು. ನಗರದಲ್ಲಿಯ ಬದುಕು ಕೃತಕ-ಕುಹಕ. ಪಾಶ್ಚಾತ್ಯರ ಅನುಕರಣೆಯಿಂದ ರೂಢಿ-ನಿಯಮಗಳನ್ನು, ಆಚಾರ ವಿಚಾರಗಳನ್ನು ಅನುಕರಿಸದಿದ್ದರೆ, ಸಿನಿಮಾ ತಾರೆಯರ ಬೆಡಗಿನ ವೇಷ-ಭೂಷಣೆಗಳೆ ನಮ್ಮ ನಗರವಾಸಿಗಳ ಅಂಧಾನುಕರಣವಾಗಿವೆ. ಹಾಗಿಲ್ಲದೆ ಹೋದರೆ ಹಳ್ಳಿಯ ಹುಡಿಗೆಯಲ್ಲಿ ವ್ಯಕ್ತಿತ್ವವಿಲ್ಲ ಎಂದು ಹೇಳುವ ನಗರದ ಜೀವಿಗಳಿಗಾಗಿ ನಗಬೇಕೋ ಅಳಬೇಕೋ ನನಗೆ ತಿಳಿಯದಾಗಿದೆ. ಇನ್ನೂ ನನ್ನ ಪುಣ್ಯ. ಅವಳು ಹೆಣ್ಣೇ ಅಲ್ಲವೆಂದು ಹೇಳಲಿಲ್ಲ !

'ಹಳ್ಳಿಯ ಹುಡುಗಿ' ಯಂತಹ ಉದ್ದೇಶ ರಹಿತ, ಕೇವಲ ಹಣ ಸೆಳೆದುಕೊಳ್ಳಬೇಕೆಂಬ ವಿಚಾರದಿಂದ ಹೊರಬಿದ್ದ ಚಿತ್ರಗಳು ನಮಗೆ ಯಾವ ದೊಡ್ಡತನ ಕಲಿಸಬಲ್ಲವು ? ಹೊಸ ಬೆಳಕು ನೀಡುವದು ಹೋಗಲಿ ಕವಿದು ಬರುವ ಕತ್ತಲೆಯನ್ನೇ ಒಲಿಸಿಬಿಡುತ್ತವೆ. ಇಂತಹ ಚಿತ್ರಗಳನ್ನು ಮೆಚ್ಚಿಕೊಂಡು ಕುಣಿದಾಡುವ ನಗರವಾಸಿಗಳಿಗಾಗಿ ನಾನು ತುಂಬ ಮರುಕು ಪಡುತ್ತೇನೆ. ಆ ಚಿತ್ರದಲ್ಲಿ ನನಗೆ ಹೇಳಿಕೊಳ್ಳುವ ವಿಚಾರವಾಗಲಿ, ಆದರ್ಶವಾಗಲಿ, ಇದೆ ಎಂದು ಅನ್ನಿಸುವದಿಲ್ಲ. ಅದಕ್ಕಿಂತಲೂ ಬರಿಯ ಮನೋರಂಜನೆಯನ್ನುಂಟು ಮಾಡುವ ನಮ್ಮ ಹಳ್ಳಿಯ ಕಿಳ್ಳಿಯ ಕ್ಯಾತರಾಟ' ಎಷ್ಟೋ ಪಾಲಿಗೆ ಬೇಕೆನ್ನಿಸುತ್ತಿದೆ. ಇಂತಹ ದರಿದ್ರ ಚಿತ್ರ ನೋಡದ ತಂಗಿ ಲೀಲಮ್ಮ ಭಾಗ್ಯವಂತೆ.

ಹೀಗೆ ಏನೇನೋ ಬರೆದೆನೆಂದು ಸಿಟ್ಟಾಗಬೇಡ ಗೆಳೆಯ. ನನ್ನ ಮನಸ್ಸು ಈಗ ತುಂಬ ಕುದಿಯುತ್ತಲಿದೆ. ಸೀತೆ ದಿನ ದಿನಕ್ಕೆ ನನ್ನಿಂದ

ದೂರ ದೂರವಾಗುತ್ತಲಿದ್ದಾಳೆ. ಒಬ್ಬರ ಸಂಗಡವೂ ಮಾತಿಲ್ಲ; ಕೃತಿಯಿಲ್ಲ. ಹಳ್ಳಿಯ ಜನರು ಅವಳನ್ನು ಮಾತನಾಡಿಸಲೆತ್ನಿಸಿ ವಿಫಲವಾಗಿದ್ದಾರೆ. ಅವಳ ತಿರಸ್ಕಾರವನ್ನು ಕಂಡು ಈಗ ಅವಳು ಎದುರಿಗಿದ್ದರೂ ಅವಳನ್ನು ಮಾತನಾಡಿಸುವದಿಲ್ಲ. ನಾನು ಸದಾಕಾಲವೂ ಅವಳ ಸಂಗಡ ಇದ್ದು ಹರಟೆ ಹೊಡೆಯುತ್ತಲೇ ಇರಬೇಕೆಂದು ಅವಳ ಹಟ. ಹಾಗೆ ನಡೆಯಲು ಈ ಹಳ್ಳಿಯಲ್ಲಿ ಹೇಗೆ ಸಾಧ್ಯ ನೀನೆ ಹೇಳು?

ನಾನಂತೂ ಬಹಳ ಹೈರಾಣಾಗಿದ್ದೇನೆ. ಈ ಬದುಕಿನಲ್ಲಿ ಬೆಳಕೆಂದು ಕಂಡೀತು ಎಂದು ಎದುರು ನೋಡುತ್ತಲಿದ್ದೇನೆ. ನೋಡಬೇಕು. ಏನಾಗುತ್ತದೆಯೋ !

ನಿನ್ನವ

**ರಾಮು**

●

ಪ್ರೀಯ ರಾಮು ೧–೪–೪೬

ನನ್ನ ಬಾಳೂ ಬರಿಗೋಳು ನೋಡು ಮಹಾರಾಯ. ನಿನಗಿಂತಲೂ ಹೆಚ್ಚಿನ ತೊಂದರೆಯನ್ನು ನಾನು ಅನುಭವಿಸುತ್ತಲಿದ್ದೇನೆ. ಆಫೀಸಿನ ಕೆಲಸ ದಿನ ದಿನಕ್ಕೂ ಹೆಚ್ಚಾಗುತ್ತಿದೆ. ಹೀಗೆ ಹೆಚ್ಚಾಗುತ್ತಿರುವ ಕೆಲಸವನ್ನು ನೋಡುತ್ತಿರುವರಂತೆ ನನಗೆ ‘ ಸರಕಾರ ರೆವ್ಹಿನ್ಯೂ ಕಚೇರಿಯ ಕಾರಕೂನರೆಂದರೆ ಏನೆಂದು ತಿಳಿದಿದ್ದಾರೋ ! ಕತ್ತೆಗಳೆ ಎಂದು ನಿರ್ಧರಿಸಬೇಕೇನೋ! ಇಲ್ಲದಿದ್ದರೆ ಕತ್ತೆಗಿಂತಲೂ ಹೆಚ್ಚಿನ ಭಾರವನ್ನು ಕಾರಕೂನರ ಮೇಲೆ ಹೇರುವದೆಂದರೆ ? ’ ಎಂದೇನೊ ವಿಚಾರ ಬರುತ್ತದೆ.

ಹೋಗಲಿ .ಇಷ್ಟೆಲ್ಲ ಕತ್ತೆಗಿಂತ ಕಡೆಯಾಗಿ ದುಡಿದು ಮನೆಗೆ ಬಂದರೆ ‘ಬಂದಿರ್ಯಾ’?ಎಂದು ಪ್ರೀತಿಯಿಂದ ಹೇಳಿ ಚಹಮಾಡಿ ತಂದು ಕೊಡುವ ಎಲ್ಲರಂತಹ ಹೆಂಡತಿಯಿಲ್ಲ. ನನಗಿರುವ ಹೆಂಡತಿ ನಾಮ ಮಾತ್ರಕ್ಕೆ. ಹಗಲು ಹೊತ್ತು ನನ್ನೆದುರು ಬಂದು ನಿಂತು ಮಾತನಾಡಲಿಕ್ಕೆ ನಿಮ್ಮ ಯಾವ ದೇವರು ಒತ್ತಾಯ ಪಡಿಸಿದರೂ ಅವಳು ಬರುವದಿಲ್ಲ. ತುರುತಿನ ಕೆಲಸ ಏನಾದರೂ ಇದ್ದರೆ ಬಾಗಿಲ ಹೊರಗೆ ನಿಂತು ಮಾತನಾಡುತ್ತಾಳೆ. ಚಹ

ವೇನೊ ಬರುತ್ತದೆ ಅದರೆ ಅದನ್ನು ತಂದು ಕೊಡುವವಳು ಹೆಂಡತಿಯಲ್ಲ; ತಾಯಿ.! ಅವಳು ತನ್ನ ಕೈಯಿಂದಲೇ ಚಹ ತಂದು ಕೊಡದ ವಿನಹ ನಾನು ಚಹವನ್ನೆ ಕ.ಡಿಯುವದಿಲ್ಲವೆಂದು ಹಟ ಹಿಡಿದರೆ ಅವಳು ಏನು ಹೇಳಿದಳು ಗೊತ್ತೆ ?

'ನೀವ ಚಹ ಕುಡಿಯೂದ್ನ ಬಿಡ್ರಿ.ಅದೇನ ಹೊಟ್ಟೆಗೆ ಹಿತಾನ, ನೆತ್ತಿಗೆ ಹಿತಾನ. ಅದನ ಕುಡದ್ರ ಏನ ಬಂದ್ದಾಂಗಾತು 'ಐಶ್ವರ್ಯ ಸಿಗತದ ಐಶ್ವರ್ಯ!'

'ದೇಹಕ್ಕೆ ಹಿತ ಆಗೂದಿಲ್ಲ; ಇನ್ನ ಐಶ್ವರ್ಯಸಿಗೋದು ದೂರಉಳೀತು.' ಅದ್ನ ನಾ ಸಾಪ-ಸಾಪಕೊಡೂದುಲ್ಲ. ಹಾಲ ಬೇಕಾರ ತಂದ ಕೊಡತೀನಿ.'

ಕೆಲಸ ಮಾಡಿ ಒಡೆದು ಹೋಗುವಂತಾದ ತಲೆಯನ್ನು ದರಿದ್ರ ಹಾಲು ಶಾಂತ ಗೊಳಿಸೀತೆ? ದೇಹಕ್ಕೆ ಪಥ್ಯವಿದ್ದರೂ ತಲೆಗೆ ಹತ್ತುತ್ತದಲ್ಲ! ಚಹದ ಕಾಲ! ಅದೂ ತಿಳಿಯಬಾರದೆ ಅವಳಿಗೆ? ಅನಿವಾರ್ಯವಾಗಿ ನಾನು ತಾಯಿ ತಂದು ಕೊಟ್ಟ ಚಹ ಕುಡಿಯುತ್ತೇನೆ. ಇದೊಂದೇ ಕೃತಿಯಲ್ಲ; ದಿವಸಕ್ಕೆ ನೂರಾರು ಇಂತಹ ಪೆದ್ದತನಗಳ ಪ್ರದರ್ಶನ ನಮ್ಮ ಮನೆಯಲ್ಲಿ ನಡೆಯುತ್ತಿರುತ್ತದೆ. ನನ್ನ ಜತೆಗೆ ಕೆಲಸ ಮಾಡುವ Mr, ಪಾಟೀಲನ ಪತ್ನಿ ಸಮಾಜಕ್ಕೆ ಸದಸ್ಯೆಯಾಗಲು ಕರೆಯ ಬಂದಿದ್ದಳಂತೆ: ಈ. ಎ. ಹೆ. ಎಂದ್ರು ಹೆಬ್ಬೊಟ್ಟೊತ್ತು ಅವಳಿಗೆ ಸಮಾಜ ವೆಂದರೆ ಏನು ಗೊತ್ತು? ಸಾಮಾಜಿಕ ನಿಯಮ, ನಿಟ್ಟುಗಳ ಅರಿವಿಲ್ಲದ ಅವಳಿಗೆ ಸಮಾಜಕ್ಕೆ ಹೋಗಲು ಸಾಧ್ಯವೆ?

ಸಾಕಾಯಿತು ಮಹಾರಾಯ. ಲೀಲೆಯಿಂದಾಗಿ ಎಲ್ಲಿ ಯಾದರೂ ಓಡಿ ಹೋಗಿ ಸನ್ಯಾಸ ಸ್ವೀಕರಿಸುವ ಹೊತ್ತು ಬಂದಿದೆ. ಅಷ್ಟು ಬೇಸರ ಈಗ ನನಗೆ.

ನಿನ್ನವ

ರಾಘು

## ೭

ಪ್ರೀಯ ರಾಘು, ೧೮—೬—೪೬

ನಿನ್ನಂತೆಯೆ ನಾನೂ ಚಂಡಿಯ ಸಂಗಡ ಕಾಲ ಕಳೆಯಲಾರದೆ ಬೇಸತ್ತು ಹೋಗಿದ್ದೇನೆ. ಅಂಥವಳನ್ನು ತಿದ್ದ ಬಹುದೆಂಬ ಆಸೆಯನ್ನು ಮೊನ್ನೆ

ತಂದೆಯ ಶ್ರಾದ್ಧ ಮಾಡುವಾಗಲೇ ಎಳ್ಳು ನೀರು ಬಿಟ್ಟು ಗಂಗೆಗೆ ಕೂಡಿಸಿದ್ದೇನೆ.

ನನ್ನಷ್ಟೆ ಕಷ್ಟವನ್ನು ನೀನೂ ಅನುಭವಿಸುತ್ತಿರುವದನ್ನು ಕಂಡು ನನಗೆ ದುಃಖವಾಗಿದೆ. ಜಗತ್ತಿನಲ್ಲಿ ನಾವಿಬ್ಬರೆ ಮದುವೆಯಾದವರೇನೊ ಎಂದುನನಗೆ ಭಾಸವಾಗುತ್ತದೆ. ತಿದ್ದಲಾರದ ಈ ಶಿಲೆಯನ್ನು ಕಡೆದು, ಕಡೆದು ಬಹಳ ದಣಿವಾಗಿ ಹೋಗಿದೆ. ವಿಶ್ರಾಂತಿಗಾಗಿ ನಿನ್ನ ಸಂಗಡ ಇದ್ದರೆ ನನಗೆ ಸಮಾಧಾನವಾಗುತ್ತದೆ. ಒಂದು ತಿಂಗಳು ರಜೆ ತೆಗೆದುಕೊಂಡು ಹೊರಟು ಬಾ. ನಿನ್ನ ಬೇಸರವೂ ಕಳೆಯಬಹುದು.

ಸಾಧ್ಯವಾದಷ್ಟು ಪ್ರಯತ್ನಿಸಿ ರಜಾ ಪಡೆದು ಬಾ. ಮನಸ್ಸನ್ನು ಇಬ್ಬರೂ ಕೂಡಿ ಹಗುರ ಮಾಡಿ ಕೊಳ್ಳೋಣ. ಬರುತ್ತೀಯಲ್ಲವೆ ?

ನಿನ್ನವ

ರಾಮು.

ಪ್ರಿಯ ರಾಮು, ೪—೮—೪೬

ನಿನ್ನ ಕಾಗದ ಕೈಸೇರಿತು. ನನಗೂ ಬೇಸರವಾಗಿದೆ ಬದುಕು. ವಿಶ್ರಾಂತಿಯಿಲ್ಲದಿದ್ದರೆ, ನಿನ್ನ ಸಹವಾಸದ ಲಾಭ ದೊರೆಯದಿದ್ದರೆ ನಾನು ತೀರ ಸೋತು ಹೋಗುತ್ತೇನೆ.

ಒಂದು ತಿಂಗಳು ರಜೆಗಾಗಿ ಮೇಲೆ ಬರೆದುಕೊಳ್ಳಲಿದ್ದೇನೆ. ನಾನು ರಜೆ ಪಡೆಯುತ್ತೇನೆಂದು ತಿಳಿದ ಮಾಮಲೇದಾರರು, ಸಿರಸ್ತೇದಾರರು ಗೊಣಗಲಾರಂಭಿಸಿದ್ದಾರೆ. ನಾನಾದರೂ ಏನು ಮಾಡಲಿ ? ಕತ್ತೆ ಏನೂ ಅಲ್ಲವಲ್ಲ! ಅದರಲ್ಲೂ ಮುಂದಿನ ವಾರವೆ ನಮ್ಮ Inspection ಬೇರೆ ಇದೆ. ಅದು ಮುಗಿಯದ ವಿನಹ ನನಗೆ ರಜೆ ಮಾತ್ರ ದೊರೆಯಲಾಗದು.

ನನ್ನ– ಲೀಲೆಯ ಮುಖಗಳು ದಿನದಿನಕ್ಕೂ ಪೂರ್ವ–ಪಶ್ಚಿಮಕ್ಕೆ ತಿರುಗಲಾರಂಭಿಸಿವೆ. ಎದುರು ಬದುರಾಗುವ ಆಸೆ ಏನೂ ಇದ್ದಂತಿಲ್ಲ.

ನಿನ್ನವ,

ರಾಮು

೮

ಪ್ರಿಯ ಗೆಳೆಯ, ೨೫—೧೦—೪೬

ನಿನ್ನ ಕಾಗದ ತಲುಪಿತು. ಸಂತೋಷ. ಸಾಧ್ಯವಾದಷ್ಟು ಬೇಗನೆ ರಜೆ ಪಡೆದು ಬಾ. ತಾಯಿಗೂ, ಸೀತೆಗೂ ನೀನು ಬರುವ ಸಮಾಚಾರ ಕೇಳಿ ಹಿಡಿಸಲಾರದಷ್ಟು ಸಂತೋಷವಾಗಿದೆ.

ಇನ್ನೊಂದು ವಿಚಾರ. ಸಕುಟುಂಬ ಸಹಿತ ನಿನ್ನನ್ನು ನೋಡುವ ಹಿರಿಯ ಆಸೆ ವ್ಯಕ್ತ ಮಾಡಿದ್ದಾಳೆ ತಾಯಿ. ಅವಳ ಆಸೆಯನ್ನು ಈಡೇರಿಸಿ ಎಂದು ನಂಬಿರುವ.

ನಿನ್ನವ,

**ರಾಮು**

[illegible]

ಪ್ರಿಯ ರಾಮು, ೮—೧೦—೪೬

ಅಂತೂ ಒಮ್ಮೆ ನಮ್ಮ Inspection ಮುಗಿಯಿತು. ಇಂತಹ ಘಟನೆಗಳಿಂದ ಯಾರಿಗೂ ಏನೂ ಪ್ರಯೋಜನವಿಲ್ಲ. ವ್ಯರ್ಥ ಶ್ರಮ. ದುಡ್ಡು ಹಾಳು.

ನಾನೊಬ್ಬನೆ ಸರಬರಾಯಿಗಾಗಿ ಮೂರು ನೂರು ರೂಪಾಯಿಗಳನ್ನು ವೆಚ್ಚಮಾಡಿದೆ. ಇನ್ನುಳಿದ ನನ್ನ ಜತೆಗಾರರು ಎಷ್ಟು ವೆಚ್ಚ ಮಾಡಿರಬೇಕು ಎಂದು ನೀನೇ ಲೆಕ್ಕ ಹಾಕು.

ಒಳ್ಳೇ ಮೋಜೆನ್ನಿಸುತ್ತದೆ ನನಗೆ. ಕಲೆಕ್ಟರ ಕಚೇರಿಯವರಾಗಲಿ, ಕಮೀಶನ್‌ರ ಕಚೇರಿಯವರಾಗಲಿ ಇನ್ಸಪೆಕ್ಶನ್ನಿಗೆ ಬಂದರೆ ರಾಜನ ಅರಮನೆಗಿಂತಲೂ ಹೆಚ್ಚಿನ ದರ್ಜೆಯಲ್ಲಿ ಇವರಿಗೆ ಸರಬರಾಯಿ ಆಗಬೇಕು. ಕುಳಿತಲ್ಲಿ ಮಣೆ, ನಿಂತಲ್ಲಿ ನೀರನ್ನು ನಾವು ಹಿಡಿದುಕೊಂಡು ನಿಲ್ಲಬೇಕು. ಕುಡಿತ, ಕುಣಿತ, ತಿನ್ನುವದು ಎಂತಹ ಅಸಹ್ಯ ರೀತಿಯಲ್ಲಿ ನಡೆಯುತ್ತದೆ ಎಂದು ವರ್ಣಿಸಲು ನನ್ನ ಲೇಖನಿಯೂ ನಡುಗುತ್ತದೆ. ಇಷ್ಟೆಲ್ಲ ಆದರಾತಿಥ್ಯ ನಡೆದರೂ ಮೇಲಾಧಿಕಾರಿಗಳಿಂದ ನಮಗೆಸಿಕ್ಕಂತೆ ಬೈಯಿಸುವ ಕಾರಕೂನರೂ ಅಲ್ಲಿರುತ್ತಾರೆ. ಕಾರಕೂನರೆನ್ನುವ ಕತ್ತೆಗಳು ನಾವು ತಲೆ ತಗ್ಗಿಸಿಕೊಂಡಿರಬೇಕು.

ಲಂಚ ತೆಗೆದುಕೊಳ್ಳುವದಕ್ಕೆ ಎಲ್ಲರೂ ನಮ್ಮನ್ನಾಕ್ಷೇಪಿಸುತ್ತಾರೆ. ಆದರೆ ಹೀಗೆ ಬಂದ ಅಧಿಕಾರಿಗಳಿಗಾಗಿ ನಾವು ಸರಬರಾಯಿ ಮಾಡದಿದ್ದರೆ ಕೆಲಸವೆ ಉಳಿಯುವದಿಲ್ಲ. ಕೆಲಸ ಉಳಿಯುವದಕ್ಕಾಗಿ ಸರಬರಾಯಿ ಮಾಡಲು ಪಗಾರದ ಹಣ ಎಷ್ಟು ಈಡಾದೀತು?

**Sick certificate** ನ್ನು ಪಡೆಯಲು ಇಂದು ಮುಂಜಾನೆ ಡಾಕ್ಟರರನ್ನು ಕಂಡೆ. ನನಗೇನೂ ಜಡ್ಡಿಯಿಲ್ಲ ಎಂದು ಹೇಳಿದ ಡಾಕ್ಟರರು ಹತ್ತು ರೂಪಾಯಿಯ ಹಸರು ನೋಟನ್ನು ಚಾಚಿದೊಡನೆ ಮುಗುಳು ನಗೆ ನಕ್ಕು ತಮ್ಮ ಕೋಟಿನ ಜೇಬಿಗೆ ಸೇರಿಸಿ ಎರಡು ತಿಂಗಳ ಅನಾರೋಗ್ಯದ **Certificate** ನ್ನು ಕೊಟ್ಟುಬಿಟ್ಟರು. ರೋಗ ಇಲ್ಲದವನಿಗೆ ಇದೆ ಎಂದು ರೋಗ ಇದ್ದವನಿಗೆ ಇಲ್ಲವೆಂದು ನಿರ್ಣಯಿಸುವ ಭಾರ ಡಾಕ್ಟರರದಲ್ಲ; ನೋಟಿನದು!

**Leave application** ಜತೆಗೆ ಡಾಕ್ಟರರ**Certificate**ನ್ನು ಜತೆಯಾಗಿಸಿ ಕಲೆಕ್ಟರ ಆಫೀಸಿಗೆ ನಾಳೆ ಕಳುಹಿಸುತ್ತೇನೆ.

ಆ ಮೇಲೆ ನಿಶ್ಚಿತವಾಗಿ ಬರುವ ದಿನಾಂಕವನ್ನು ತಿಳಿಸುತ್ತೇನೆ.

ನಿನ್ನವ

**ರಾಘು.**

೯

ಪ್ರಿಯ ರಾಘು, ೨೨—೧೨—೪೫

ನಿನ್ನ ಕಾಗದ ತಲುಪಿತು. ರಜೆ ದೊರೆತೊಡನೆ ಬರುವ ದಿನ ತಿಳಿಸು. ಅಂದರೆ ದೂರದ ನಿಲ್ದಾಣಕ್ಕೆ ಚಕ್ಕಡಿ ತೆಗೆದುಕೊಂಡು ಬರುತ್ತೇನೆ. ಕಾಡು ದಾರಿಯ ವಿನಹ ನನ್ನ ಹಳ್ಳಿಗೆ ಬೇರೆ ಯಾವ ಸರಿಯಾದ ಮಾರ್ಗವೂ ಇಲ್ಲ. ಇನ್ನು ಮೋಟಾರ ಸೌಕರ್ಯವೆಲ್ಲಿ?

ನನ್ನ ತಾಯಿ ಸಕುಟುಂತ ಸಹಿತ ನಿನ್ನನ್ನು ನೋಡುವ ಆಸೆಪಟ್ಟ ಸಮಾಚಾರವನ್ನು ಹಿಂದಿನ ಕಾಗದದಲ್ಲಿ ಬರೆದಿದ್ದೆ. ಆ ವಿಚಾರವಾಗಿ ಯಾವ ಉತ್ತರವೂ ನಿನ್ನ ಕಾಗದದಲ್ಲಿಲ್ಲ. ನಿನ್ನ ಆಫೀಸಿನ **Inspection** ಗಲಾಟೆಯಲ್ಲಿ ಮರೆತಿರಬಹುದು. ಆದರೆ ಹಾಗೆ ಮಾಡಬೇಡ ಮಹರಾಯ. ತಾಯಿಯಂತೆ ನಾನೂ ಆಸೆಪಡುತ್ತೇನೆ.

ನನ್ನ ಮನೆಯ ಸ್ಥಿತಿ ಯಥಾಪ್ರಕಾರವಾಗಿಯೆ ಇದೆ.

ನಿನ್ನವ

**ರಾಮು.**

●

ಪ್ರಿಯ ರಾಮು,

ಕೊನೆಗೆ ನಿನ್ನೆ ನನ್ನ ರಜೆ ಮುಂಜೂರಾಗಿ ಬಂದಿತು. ಇದು ನಮ್ಮ **Department** ವೈಶಿಷ್ಟ್ಯ. ಅದಕ್ಕಾಗಿ ನನಗೆ ಆಶ್ಚರ್ಯವೇನೂ ಇಲ್ಲ. ಮೊನ್ನೆ ಒಂದು ಇಂತಹದೆ ಮೋಜಾಯಿತು. ನನ್ನ ಜತೆಯ ಕಾರಕೂನ ಜಡ್ಡಿಗೆ ಬಿದ್ದಿದ್ದ. ರಜೆಗೆ ಅರ್ಜಿ ಹಾಕಿದ ಆರು ದಿನಗಳಲ್ಲಿ ಅವನು ತೀರಿ ಹೋದ. ರಜೆ ಒಂದುವರೆ ತಿಂಗಳಿನ ಮೇಲೆ ಮುಂಜೂರಾಗಿ ಬಂದಿತು. ನಮ್ಮ ಖಾತೆಯಲ್ಲಿ ರಜೆಪಡೆಯುವವನು ಒಂದೆರಡು ತಿಂಗಳು ಮೊದಲೇ ಸಾಯುತ್ತೇನೆಂದೊ ಜಡ್ಡಿಗೆ ಬೀಳುತ್ತೇನೆಂದೊ ಅರ್ಜಿಹಾಕಬೇಕು.

ಇನ್ನು ಮೂರು ದಿನಗಳ ಮೇಲೆ ನಾನು ಬರುತ್ತೇನೆ. ನನ್ನ ದರಿದ್ರ ದಾಂಪತ್ಯನೋಡಲು ನಿನ್ನ ತಾಯಿ ನೀನು ಆಸೆಪಟ್ಟಿರಾ? ಪ್ರಯತ್ನಿಸುತ್ತೇನೆ— ನನ್ನ ಮಹಾಕಾಳಿಯನ್ನು ಪ್ರಸನ್ನಗೊಳಿಸಿ ಕರೆದು ತರಲು.

ಬೆಳಗಿನ ಲೋಕಲ್ಲಿಗೆ ದಿ. ೭ನೆಯ ದಿನ ಬರುತ್ತೇನೆ.

ನಿನ್ನವ

**ರಾಘು.**

# ಅ ರೆ ಯಾ ಳು

## ೧

'ನಾನು ಬೆಳಗಿನ ಲೋಕಲ್ಲಿಗೆ ದಿನಾಂಕ ೭ನೆಯ ದಿನ ಬರುತ್ತೇನೆ....'

ಕನ್ನಡ ಶಾಲೆಯ ಮಾಸ್ತರರು ಕಳುಹಿಸಿದ ರಾಘುವಿನ ಆ ಓಲೆಯನ್ನು ಓದಿದೊಡನೆ ಹಿಗ್ಗಿ ಹಿರೇಕಾಯಿಯಾಯಿತು ರಾಮುವಿನ ಮೊಗ. ಹೆಮ್ಮೆಯ ನಗೆಯೊಂದು ಅವನ ತುಟಿಗಳಲ್ಲಿ ಮಿಂಚಿತು. ಸಂತೋಷದ ಭರದಲ್ಲಿ ರಾಮು ಕೂಗಿದ.

'ಇನ್ನ ಮೂರ ದಿನಕ್ಕ ರಾಘು, ಬರತನವ್ವಾ. ರಾಘು ಬರತಾನ....'

ಮಗನ ಸಂತೋಷದ ಸ್ವರವನ್ನಾಲಿಸಿ ರಾಮುವಿನ ತಾಯಿ ಮಡಿಯಲ್ಲಿದ್ದರೂ ಹೊರಗೆ ಬಂದರು.

ರಿಂದಕ್ಕ ಹಳೆಯ ಕಾಲದವರು. ಅವತ್ತಾಲ್ಕರ ಗಡಿ ದಾಟಿತ್ತು ಅವರ ವಯಸ್ಸು. ಮೊಗ ನೀರಿಗೆಗಟ್ಟಿತ್ತು. ಚಿಕ್ಕಂದಿನಲ್ಲಿಯೆ ಪತಿಯನ್ನು ಕಳೆದುಕೊಂಡ ಸ್ಮಾರಕವಾಗಿ ಅವರ ಮೈಯನ್ನು ಕೆಂಪು ಸೀರೆ ಅಲಂಕರಿಸಿತ್ತು. ಹಣೆಯ ಮೇಲೆ ಗೋಪಿಚಂದನದ ಮುದ್ರೆ, ತೆಳ್ಳಗೆ ನೇರವಾಗಿ ಅಂಗಾರ ಬಳಿದು ಕೊಂಡಿದ್ದರು.

ತಾಯಿಯನ್ನು ಕಂಡೊಡನೆ ರಾಮು ಗೆಳೆಯನ ಕಾಗದವನ್ನು ಸಾದ್ಯಾಂತವಾಗಿ ಓದಿತೋರಿಸಿದ. ಹಾಗೆಯೆ

'ಅವ್ವ, ಇನ್ನ ಮೂರ ದಿನಕ್ಕ ರಾಘು ಬರತಾನ.'

'ಭಾಳ ಸಂತೋಷಾತಪ್ಪ.'

ರಾಮುವಿಗೆ ಮುಂದೆ ಏನನ್ನೂ ಹೇಳುವದಕ್ಕಾಗಲಿಲ್ಲ. ಗೆಳೆಯನ ಬರುವಿಕೆಯ ಶುಭವಾರ್ತೆಯಿಂದ ಅವನ ಹೃದಯದಲ್ಲಿ ಹಿಗ್ಗಿನ ಗುಡಿಕಟ್ಟಿತ್ತು. ಮನಸ್ಸು ಅರಳಿತ್ತು. ಅಂತಃಕರಣ ಕುಲುಕಿತ್ತು. ಗೆಳೆತನದ ಕೋಟಿಯೆ ಅಂತಹದೇನೊ ! ವಯೋವೃದ್ಧ ರಿಂದಕ್ಕನವರಿಗೇ ಹೇಳತೀರದಷ್ಟು ರಾಘುವಿನ ಆಗಮನ ವಾರ್ತೆಯಿಂದ ಸಂತೋಷವಾಗಿರುವಾಗ ಆತ್ಮೀಯ ಗೆಳೆಯ ರಾಮುವಿಗೆ ಎಷ್ಟು ಸಂತಸವಾಗಿರಬೇಡ !

ಅದಕ್ಕಾಗಿಯೆ ಊಟಕ್ಕೆ ಕುಳಿತರೂ ಅವನ ಗಂಟಲಿನಲ್ಲಿ ಬೇಗ ಬೇಗನೆ ಅನ್ನ ಇಳಿಯಲಿಲ್ಲ. ಊಟ ಮುಗಿಸಿ ಅವನು ತನ್ನ ಕೊಟಡಿಯಲ್ಲಿ ಅಡ್ಡಾದಾಗ ಸೀತೆಯೂ ಊಟ ಮುಗಿಸಿ ಅಲ್ಲಿಗೆ ಬಂದಳು. ಅವಳ ಮೊಗ ಅದೇಕೊ ಚಿಕ್ಕದಾಗಿತ್ತು. ರಾಮುವಿಗೆ ಅತ್ತ ಗಮನವಿರಲಿಲ್ಲ. ತನ್ನ ಉತ್ಸಾಹದಲ್ಲಿಯೆ ಅವನು ಇಂದು ಎಂದಿಲ್ಲದ ರೀತಿಯಲ್ಲಿ ಪತ್ನಿಯನ್ನು ಸ್ವಾಗತಿಸಿದ. ಸೀತೆ ಅವನ ಬಳಿಯಲ್ಲಿಯೆ ಕುಳಿತುಕೊಂಡು ಮೌನವಾಗಿ ಎಲೆ–ಅಡಿಕೆ ಮಡಿಚಿಕೊಟ್ಟಳು.

ಹದಿನೈದು ನಿಮಿಷಗಳೂ ಮೌನವಾಗಿಯೆ ಕಳೆದವು. ಸೀತೆ ಕೊನೆಗೆ ತಡೆಯಲಾರದೆ ಕೇಳಿದಳು.

'ನಿಮ್ಮ ಗೆಳೆಯರು ಬರತಾರಂತಲ್ಲಃ !'

'ಹೌದ ಸೀತಾ. ಆಗರ ಅಷ್ಟ ಸಿಟ್ಟ, ಸೆಡವು ಬಿಟ್ಟು ಚಲೋತ್ನ್ಯಾಗ ನಡಕೊ !

'ನಡೀಲಿಕ್ಕೇ ಬಂದೀನಿ ನಿಮ್ಮ ಮನೀಗೆ. ಅಂದಮ್ಯಾಲೆ ನಡಕೊಂಬೂದ್ನ !'

ಸೀತೆಗೆ ನಿಜವಾಗಿಯ ಸಂತಾಪವಾಗಿತ್ತು. ರಾಘು ಬರುವ ಸಮಾಚಾರವನ್ನು ತನ್ನೆದುರು ಹೇಳದೆ ತಾಯಿಯೆದುರು ಹೇಳಿದ್ದಕ್ಕಾಗಿ ಅವಳಿಗೆ ತುಂಬ ಕೋಪ ಬಂದಿತ್ತು. ಜತೆಗೆ ಇಲ್ಲಿಗೆ ಬಂದಾಗಲೂ ಅವನು ಆ ವಿಷಯವಾಗಿ ತುಟಿ ಬಿಚ್ಚದಿದ್ದುದನ್ನು ತಿಳಿದು ಸೀತೆ ರಾಮುವನ್ನು ಕೆಣಕಿದಳು. ವ್ಯಂಗ್ಯ ನುಡಿಯಾಡಿದಳು. ಆದರೆ ರಾಮುವಿಗೆ ಮಾತ್ರ ಗೆಳೆಯನ ಆಗಮನದ ವಾರ್ತೆಯಿಂದ ಎಂತಹ ವಿಷವನ್ನೂ ನಗುನಗುತ್ತ ಕುಡಿದುಬಿಡುವ ಬಲ ಬಂದಿತ್ತು. ಅದಕ್ಕಾಗಿಯೆ ಅವನು ನಗುತ್ತ ಹೇಳಿದ,

'ಖರೆ ಬಡದಾಡೂ ಮನಸ್ಸಿದ್ರ ರಾಘು ಬಂದ ಹೋದಮ್ಯಾಲೆ ಬಡದಾಡೂಣ ಸೀತಾ. ಅದು ಅವನ ಮುಂದ ಮಾತ್ರ ಹಿಂಗ ಪ್ರದರ್ಶನ ಮಾಡಬ್ಯಾಡ. ಇಷ್ಟಃ ನಾ ನಿನ್ನ ಹತ್ರ ಬೇಡಿಕೊಂಬೂದು.'

'ಅಂದ್ರಃ–ಮಂದೀ ಮುಂದ ಪ್ರದರ್ಶನ ಮಾಡೂ ಹಟ ಹಿಡದೀನಿ ಅಂತ ತಿಳದೀರೇನು ಮತ್ತಃ?'

'ಹಂಗೇನೂ ಇಲ್ಲ ಸೀತಾ. ಇದ್ದದ್ರಾಗಃ ಸಂಬಾಳಿಸಿಗೊಂಡ ಹೋಗೂಣ. ದಣಿದ ಬ್ಯಾಸತ್ತ ಬರೂ ಗೆಳೆಯನ ಮುಂದ ಬರೆ ಇದಃ ಕತಿನಃ ನಡದ್ರ ಓಡಿ ಹೋಗಬಾರದಂತ ನಾ ಇಷ್ಟ ಹೇಳಿಕೋತೀನಿ !

ರಾಮು ದೀನನಾಗಿ ಪತ್ನಿಯನ್ನು ಬೇಡಿಕೊಂಡ. ಅವನ ನೋಟದಲ್ಲಿ ದೈನ್ಯವೆ ತುಂಬಿ ತುಳುಕುವ ಹಾಗಿತ್ತು. ಅವನ ಹೃದಯವನ್ನು ಗುರುತಿಸುವದು ಸೀತೆಗೆ ಅಸಾಧ್ಯವಾಗಲಿಲ್ಲ ಎದ್ದ ಕುದಿಯನ್ನೆಲ್ಲ ಒಳಗೆಯೆ ಹತ್ತಿಕ್ಕಿಕೊಂಡು ಕೇಳಿದಳು.

'ಎಂದ ಬರತಾರಂತಃ?'

'ಇನ್ನ ಮೂರ ದಿನಕ್ಕ. ಸಂತೋಷದಿಂದ ಇರತೀಯಃ ಅವ ಬಂದಾಗ ?'

'ಹುಂ'

'ಯಾವ ತಕರಾರೂ ಮಾಡಬಾರದು ?'

'ಕೈ ಹಿಡಿದ ನಿಮಗ ನನ್ನ ಮ್ಯಾಲೆ ಅಷ್ಟ ವಿಶ್ವಾಸ ಇಲ್ಲೇನು ?'

ರಾಮು ಪ್ರತಿಯಾಗಿ ಏನನ್ನೂ ಹೇಳಲಿಲ್ಲ. ಅವನಿಗೆ ಸೀತೆಯಲ್ಲಿ ವಿಶ್ವಾಸ ಉಳಿದಿತ್ತೊ ಇಲ್ಲವೊ ಹೇಳುವದೆ ಕಷ್ಟ! ಮತ್ತೆ ಅಲ್ಲಿ ಮೌನ ಕವಿಯಿತು. ಗೆಳೆಯನ ಸ್ವಾಗತಕ್ಕಾಗಿ ಏನೇನು ಸಿದ್ಧತೆ ಮಾಡಬೇಕೆಂದು ಯೋಚಿಸುವದರಲ್ಲಿಯೆ ಅವನು ನಿರತನಾದ.

ಸೀತೆ ಕಲ್ಲಿನ ಬೊಂಬೆಯಂತೆ ಕುಳಿತುಕೊಂಡಿದ್ದಳು ರಾಮುವಿನ ಪಕ್ಕ ದಲ್ಲಿಯೆ. ರಾಘುವಿನ ಬರುವಿಕೆಯಿಂದ ಅವಳಿಗೂ ಸಂತೋಷವಾಗಿತ್ತು. ಹಾಗೆ ನೆನೆಯುತ್ತಿರುವಂತೆ ಸೀತೆಯ ತಲೆಯಲ್ಲಿ ಹಠಾತ್ತನೆ ಯಾವವೊ ವಾಕ್ಯಗಳು ಮಿಂಚಿ ಮಾಯವಾದವು.

ಯಾವ ವಾಕ್ಯಗಳವು ?–ಸೀತೆ ಜ್ಞಾಪಿಸಿಕೊಂಡಳು. ರಾಘು ಬರೆದ ಒಂದು ಕಾಗದ. ಹೊಲದ ಅವಸರದಲ್ಲಿ ರಾಮು ಅದನ್ನು ತನ್ನ ಕೊಟಡಿ ಯಲ್ಲಿ ಮರೆತು ಹೋಗಿದ್ದ. ಅದು ಅವಳ ಕೈ ಸೇರಿತ್ತು. ಪುನಃ ಪುನಃ ಅದನ್ನೋದಿ ಹಿಗ್ಗಿದ್ದಳು ಸೀತೆ. ತನ್ನ ವಿಚಾರವಾಗಿ ತುಂಬ ಅಭಿಮಾನ ಇಟ್ಟುಕೊಂಡ ಅಣ್ಣನ ಜ್ಞಾಪಕವಾಯಿತು ಅಂದೇ ಅವಳಿಗೆ. ಇಂದೂ ಅದೇ ಜ್ಞಾಪಕದಲ್ಲಿ ಅವಳು ಮರಳಿ ಮರಳಿ ಆ ಕಾಗದವನ್ನು ನೆನೆಸಿದಳು

'ನಾಳೆ ನಾವು ನಿನ್ನ ಹಳ್ಳಿಗೆ ಬಂದಾಗ ಹೊರಗೆ ಕುಳ್ಳಿರಿಸಿ ಊಟಕ್ಕೆ ಹಾಕೀ ಮತ್ತೇ....ನಿನ್ನ ತಾಯಿಯುವರನ್ನು। ನಿನ್ನ ದಾರಿಗೆ ತೆಗೆದುಕೊಂಡು ಬಾ. ಅಂದರೆ ನಿನ್ನ ಮಡದಿ ಪುರಾಣ ಕಾಲದ ಸೀತೆಯಂತೆ ನಿನ್ನ ಮನ ಸ್ಸಿನ ಮೂರ್ತಿಯಾಗುತ್ತಾಳೆ....'

ಬಹಳ ಹೊತ್ತಿನವರಗೆ ಅದನ್ನೆ ಮೆಲುಕು ಹಾಕುತ್ತ ಕುಳಿತಿದ್ದಳು ಸೀತೆ. ಅನಂತರ ಅವಳ ಹೃದಯ ಪಟಲದ ಮೇಲೆ ತನ್ನ ಸಂಸಾರದ ಚಿತ್ರ ನಿಚ್ಚಳ ವಾಗಿ ಮೂಡಿತು. ಅವಳ ಒಳಗಣ್ಣು ಆ ಚಿತ್ರವನ್ನೆ .ದಿಟ್ಟಿಸಿ ನೋಡಿತು. ಛಿದ್ರ, ಛಿದ್ರವಾದಂತೆ ಕಾಣುವ ಆ ಸಂಸಾರ ನೌಕೆಯನ್ನು ನೋಡುತ್ತಿರು ವಂತೆ ಅವಳ ಹೃದಯದಿಂದ ಗಾಢವಾದ ನಿಟ್ಟುಸಿರು ತೇಲಿ ಬಂದಿತು. ಮನಸ್ಸೂ ಜತೆಗೆ ಮಾರ್ನುಡಿಯಿತು.

'ನಮ್ಮ ಸಂಸಾರದಲ್ಲಿ ದಿನದಿನಕ್ಕೂ ಬೇಸರ, ಅನಾಸಕ್ತಿ ಬೆಳೆಯುತ್ತಿದೆ. ಹೃದಯದಿಂದಲೆ ನಾವು ಪರಸ್ಪರರು ದೂರದೂರ ಸರಿಯುತ್ತಿರುವ ಹಾಗೆ ಭಾಸವಾಗುತ್ತದೆ....

'ಅವರು ಈ ದರಿದ್ರ ಕೊಂಪೆ ಬಿಟ್ಟು ಬರಲಾರರು....ನಾನು ಇಲ್ಲಿ ಬದುಕಲಾರೆ....ಅವರ ದಾರಿಯಲ್ಲಿ ನಡೆಯಲು ನನಗೆ ಹೇಗೆ ಸಾಧ್ಯವಿಲ್ಲವೊ ಹಾಗೆಯೆ ನನ್ನ ದಾರಿಯಲ್ಲಿ ನಡೆಯಲು ಅವರಿಗೆ ಮನಸ್ಸಿಲ್ಲ....ಅಂತೂ ನಮ್ಮ ಮುಖಗಳು ಬೇರೆ ಬೇರೆ ದಿಕ್ಕಿಗೆ ಹೊರಳಿವೆ. ಆ ದೃಷ್ಟಿ ದೃಷ್ಟಿಗಳ ಸಂಗಮ ವಾಗುವದೆಂದು ?....

'ಆ ಅಮೃತ ದಿನ, ಅಮರ ದಿನ ಬಂದೀತೆ ?....

'ಸಂಸಾರ ರಥದ ಗಾಲಿಗಳು ಭೂಮಿಯಲ್ಲಿ ಕುಸಿದು ನಿಂತ ಈ ಪರಸ್ಥಿತಿಯಲ್ಲಿ ಬರುವ ಅವರ ಗೆಳೆಯರು ಕುಸಿದ ಗಾಲಿಗಳನ್ನು ಮೇಲೆತ್ತಿಡಲು ನೆರವಾದಾರೆ?....ಅವರಿಗೆ ಬುದ್ಧಿ ಹೇಳಿ ನಮ್ಮನ್ನು ದಾರಿಗೆ ಕೂಡಿಸಿಯಾರೆ?.... ನಮ್ಮವರ ಮನೋವೃತ್ತಿಯನ್ನು ಬದಲಾಯಿಸಿ ಮತ್ತೆ ನಮ್ಮ ಬಾಳು ಸುಲಲಿತವಾಗುವ ಹಾಗೆ ಮಾಡಿಯಾರೆ?....ಈ ದರಿದ್ರ ಕೊಂಪೆಯಿಂದ ನನ್ನನ್ನು ಅವರು ಬಂಧಮುಕ್ತಗೊಳಿಸಿಯಾರೆ? ....

'ಅಂತಹ ಹಿರಿಯ ಬಂಧುವಾಗಿ ಅವರು ಬರಲಿ. ದೂರದ ಎರಡೂ ದಡಗಳನ್ನು ಶೇತುವೆಕಟ್ಟಿ ಕೂಡಿಸಲಿ....'



'ಸೇತುವೆ ಕಟ್ಟಿ ಆ ಎರಡೂ ದಡಗಳನ್ನು ಒಂದುಗೂಡಿಸಬೇಕು. ಅದು ಗೆಳೆಯನಾದ ನನ್ನ ಕರ್ತವ್ಯ.'

ರಾಮು ತನ್ನ ಹೊಲದ ಮಾವಿನ ಮರದ ಕೆಳಗೆ ಬಿದ್ದುಕೊಂಡು ಯೋಚಿಸುತ್ತಿದ್ದ. ಅವನ ರೈತ ಭರಮು ತುಸು ದೂರದಲ್ಲಿ ಕುಳಿತ ಗಮನವೂ ಈಗ ಅವನಿಗಿರಲಿಲ್ಲ. ಆಳುಗಳು ಹೊಲದಲ್ಲಿಯ ಕಳೆ ತಗಿಯಲು ಅಲ್ಲಲ್ಲಿ ಕುಳಿತಿದ್ದರು. ಅವರೆಡೆಗೆ ಅವನು ಕುಳಿತು ಎರಡು ತಾಸಾಗಿದ್ದರೂ ದೃಷ್ಟಿ ಹಾಯಿಸಿರಲಿಲ್ಲ. ಈಗ ಅವನ ಮನಸ್ಸೆಲ್ಲ ರಾಘುವಿನ ಸ್ವಾಗತಕ್ಕಾಗಿ, ಅವನ ಬಾಳನ್ನು ಬೆಳಗಿಸುವದಕ್ಕಾಗಿ ಯೋಚಿಸುತ್ತಿತ್ತು. ಆ ಯೋಚನೆಯಲ್ಲಿ ಎದುರಿನ ಸೃಷ್ಟಿ ಮರೆತುಹೋಗಿತ್ತು.

'ಎಂತಹ ವಿಚಿತ್ರ ಅವನು....ಹಳ್ಳಿಯ ಜನರನ್ನು, ಅವರ ಆಚಾರ ವಿಚಾರಗಳನ್ನು ಕಂಡರೆ ಅವನೇಕೆ ಅಷ್ಟು ಉರಿದು ಬೀಳುತ್ತಾನೋ!....

'ಅವನಿಗೇನೂ ಹಳ್ಳಿಯ ಪರಿಚಯವಿಲ್ಲ ನಗರದಲ್ಲಿಯೆ ಹುಟ್ಟಿ, ನಗರದಲ್ಲಿಯೆ ಬೆಳೆದ ಅವನಿಗೆ ಹಳ್ಳಿಯೆಂದರೇನು ಗೊತ್ತು ?....ಎತ್ತೆತ್ತಲೊ ಅಪಕ್ವ ರೀತಿಯಲ್ಲಿ ತೆಗೆದ, ಉದಯಕಾಲದ ಚಿತ್ರವನ್ನು ನೋಡಿ ಇಂತಹದೆ ವಿಶ್ವ ಚಿತ್ರಕಾರನು ನೀಡುವ 'ಉದಯ'ದ ಚಿತ್ರ ಎಂದು ನಿರ್ಣಯಿಸಿದ ಹಾಗೆ ಅವನೂ ಹಳ್ಳಿಯ ಬದುಕನ್ನೂ ಎಲ್ಲೋ ಒಬ್ಬಿಬ್ಬರನ್ನು ಕಂಡು ನಿರ್ಣಯಿಸಿ ಬಿಟ್ಟಿದ್ದಾನೆ.

'ಈ ನಿರ್ಣಯ ಅಸಾಧು ಎಂದು ಅವನಿಗೆ ತೋರಿಸಿಕೊಡಬೇಕು. ವಿಶ್ವ ಚಿತ್ರಕಾರನ ಸುಂದರ ಚಿತ್ರಗಳ ಹಾಗಿರುವ ಹಳ್ಳಿಯ ಬದುಕಿನ, ಹಳ್ಳಿಯ ಸಂಸ್ಕೃತಿಯ ದರ್ಶನ ಮಾಡಿಸಿ ರಾಘುವನ್ನು ಮನುಷ್ಯನನ್ನಾಗಿ ಮಾಡಬೇಕು. ಅವನಿಗಿರುವ ತಿರಸ್ಕಾರವನ್ನು ಹೊಡೆದೋಡಿಸಿ ಹಳ್ಳಿಯ ಜನರೂ ಮನುಷ್ಯರು ಎಂಬುದನ್ನು ಅರಿತು ಒಪ್ಪುವಂತೆ ಮಾಡಬೇಕು'

ರಾಮುವಿನ ತಲೆಯಲ್ಲಿ ಮುಂಗಾರಿಯ ಮಳೆಯಂತೆ ರಭಸದಿಂದ ಯೋಚನೆಯ ಸೆಳಕುಗಳು ಹೊಡೆಯುತ್ತಿದ್ದವು. ಹೊತ್ತು–ಗೊತ್ತು ಯಾವುದರ ಪರಿವೆಯೂ ಈಗ ಅವನಿಗಿರಲಿಲ್ಲ.

ಮೂರು ತಾಸುಗಳೂ ಜಾರಿಹೋದವು. ಸೂರ್ಯಗೋಲ ಪಶ್ಚಿಮದ ಕ್ಷಿತಿಜದಲ್ಲಿ ಅರ್ಧ ಮುಳುಗಿ ಮೈ ಕೆಂಪಗೆ ಮಾಡಿಕೊಂಡು ಸಂಪೂರ್ಣವಾಗಿ ಮುಳುಗುವ ಸಾಹಸದಲ್ಲ ತೊಡಗಿತ್ತು. ವಿಚಿತ್ರ ರೀತಿಯ ಬಣ್ಣ, ಬಣ್ಣಗಳಿಂದ ಆಗಸದ ಪಶ್ಚಿಮ ಭಾಗ ಅಲಂಕರಿತವಾಗಿತ್ತು. ಗಾಳಿ ಬೀಸಲೊ ಬೇಡವೊ ಎಂದು ಹೊಯ್ದಾಡುತ್ತಿತ್ತು.

'ಧನೇರ ಹೊತ್ತ್ರ ಮುಣಗಾಕ ಬಂತ್ರಿ.'

ಭರಮ ರಾಮುವನ್ನೆಚ್ಚರಿಸಿದ. ರಾಮು ಒಂದು ಸಲ ಕಣ್ಣು ಬಿಟ್ಟು ಭರಮನನ್ನು ನೋಡಿದ. ಭರಮ ಸುಮ್ಮನೆ ನಿಂತಿದ್ದ. ಅವನ ದೃಷ್ಟಿ ಹೊಲದೆಡೆಗೆ ಹರಿಯಿತು. ಕಳೆ ತಗಿಯಲು ಬಂದ ಆಳುಗಳು ಹೋಗಿ ಎಷ್ಟೋ ಸಮಯವಾಗಿತ್ತು.

'ಆಳಿನ ಲೆಕ್ಕ ಹಚಗೊಂಡ್ರೇನೆಪ್ಪಾ?'

'ಇವತ್ತ ಬ್ಯಾಡ. ನಾಳೆ ಹಚಿಗೋತೀನಿ.'

ಎಂದು ರಾಮು ಹಾಗೆಯೆ ಮನೆಗೆ ನಡೆದ ಹೊಲದಾಟಿ ಹೋಗುವಾಗ ಬೇಲಿಯ ಪಕ್ಕದಲ್ಲಿ ತಲೆ ಎತ್ತಿ ನಿಂತ ಚಂಡು ಹೂ ಕೊಂಚ ಬೀಸಿದ ಗಾಳಿಗೆ ತಲೆಯಾಡಿಸಿತು. ಅರಳಿದ ರಾಮುವಿನ ಮನಸ್ಸೂ ಮಾರ್ನುಡಿಯಿತು.

'ಗೆಳೆಯನ -ಬಾಳು ಮತ್ತೆ ಬೆಳಗಲಿ!....ಅದಕ್ಕೆ ನನ್ನ ಹಳ್ಳಿ, ರಂಗ ಭೂಮಿಯಾಗಲಿ!!'



'ಬಾಳಿನ ರಂಗದಲ್ಲಿ ನಾನು ಲೀಲೆ ಒಂದಾಗಿ ಕುಣಿಯಬಹುದೆ?.... ನನ್ನ ಸಂಸಾರದಲ್ಲಿ ನೆಮ್ಮದಿ ಕಾಲೂರಿ ನಿಂತೀತೇ?' ಸುಖ ಸಂತೋಷಗಳ ಆಗರವಾದೀತೆ ನನ್ನ ಬದುಕು?....

'ಸುಸಂಸ್ಕೃತೆಯಾದ ರಾಮುವಿನ ಪತ್ನಿ ನನ್ನ ಹುಚ್ಚು ಹುಡುಗಿಗೆ ಬೆಳಕಿನ ದೀಪ ತೋರಿಸಿದರ?.... ನಗರದ ಇರುವಿಕೆ ಕಲಿಸಿದರೆ?'

'ನಿಜವಾಗಿಯೂ ಹಾಗಾದರೆ ನಾನೆಂತಹ ಭಾಗ್ಯವಂತ!....'

ರಾಘು ಹಳ್ಳಿಗೆ ಹೊರಡುವದೆಂದು ನಿರ್ಧರಿಸಿದಾಗಿನಿಂದಲೂ ಇದೇ ರೀತಿಯ ವಿಚಾರ ಅವನ ಮನದಲ್ಲಿ ಮೂಡುತ್ತಲಿದೆ. ಕುಳಿತಲ್ಲಿ ನಿಂತಲ್ಲಿ- ಎಲ್ಲೆಲ್ಲೂ ಹೀಗೆ ಲೆಕ್ಕ ಹಾಕುತ್ತಿರುವ ಮನಸ್ಸಿನ ರೀತಿ ಅವನಿಗೆ ಬಹಳ ವಿಚಿತ್ರವಾಗಿ ತೋರಿತು. ಮನುಷ್ಯನ ಮನಸ್ಸು ಎಷ್ಟು ಮೋಜಿನದು ಎಂದು ಅವನಿಗೆ ತುಂಬ ಅಚ್ಚರಿ.

ಈಗಲೂ ಹಾಗೆಯೆ ಆಯಿತು. ನಾಳೆ ಅವನು ಇನ್ನೊಬ್ಬ ತಾತ್ಕಾಲಿಕವಾಗಿ ನಿಯಮಿಸಲ್ಪಟ್ಟ ಕಾರಕೂನನಿಗೆ ಚಾರ್ಜು ಕೊಡಬೇಕಾಗಿತ್ತು. ಅದಕ್ಕಾಗಿಯೆ ಹಿಂದೆ ಉಳಿದ ಕೆಲಸಗಳನ್ನೆಲ್ಲ ಈ ರಾತ್ರಿ ಮುಗಿಸಿ ಬಿಡಲು ಗಟ್ಟಿ ಮನಸ್ಸು ಮಾಡಿ ಊಟವಾದೊಡನೆಯೆ ಕುಳಿತಿದ್ದ. ಸಿಗರೇಟ ಪಾಕೀಟುಗಳು, ಬೆಂಕಿಪೊಟ್ಟಣ ರಾಶಿರಾಶಿಯಾದ ಕಾಗದ ಅವನ ಸುತ್ತಲೂ ಬಿದ್ದಿದ್ದವು. ಒಂದು ಪಾಕೀಟ ಸಿಗರೇಟನ್ನು ಖಾಲಿ ಮಾಡಿದಾಗ ಅರ್ಧ ಕೆಲಸವೇನೊ ಮುಗಿಯುವದರಲ್ಲಿತ್ತು. ಮತ್ತೆ ಸಿಗರೇಟನ ತಲಬಾಯಿತು. ಇನ್ನೊಂದು ಸಿಗರೇಟನ್ನು ಬಾಯಿಗಿಟ್ಟುಕೊಂಡು ಹೊತ್ತಿಸಿ ಯಾದ ಮೇಲೆ

ಕೈ ಮುಂದಕ್ಕೋಡಲಿಲ್ಲ. ಸಿಗರೇಟಿನ ಹೊಗೆ ಸರಪಳಿ ಸರಪಳಿಯಾಗಿ ಹೊರಹೊಮ್ಮುತ್ತಿರುವಂತೆ ಸುಪ್ತವಾಗಿ ಮಲಗಿದ ಆ ವಿಚಾರವೆ ಮತ್ತೆ ತಲೆಯಲ್ಲಿ ಮಿಂಚಿತು. ಆ ವಿಚಾರದಲ್ಲಿ ಬೆರೆಯುತ್ತಿರುವಂತೆ ಕೈಯಲ್ಲಿಯ ಪೆನ್ನು, ಹಾಸಿದ ಜಮಖಾನೆಯ ಮೇಲೆ ಬೋರಲಾಗಿ ಬಿದ್ದಿತು. ಸೊಳ್ಳೆಯೊಂದು 'ಗುಂಯಿ' ಗುಡುತ್ತ ಬಂದು ಅವನ ಹಣೆಗೆ ಮುದ್ದಿಟ್ಟರೂ ಅವನು ಅತ್ತ ಗಮನವೀಯದಷ್ಟು ಆ ವಿಚಾರದಲ್ಲಿ ಸಮರಸನಾಗಿದ್ದ.

ಅರ್ಧಗಂಟೆ ಹಾಗೆಯೆ ಜಾರಿ ಹೋಯಿತು. ರಾಘುವಿನ ದೃಷ್ಟಿ ಅಕಸ್ಮಾತ್ತಾಗಿ ಮಲಗಿ ನಿದ್ರಿಸುತ್ತಿದ್ದ ಲೀಲೆಯನ್ನು ಸಂದರ್ಶಿಸಿತು. ಶಾಂತ ಚಿತ್ತಳಾಗಿ ಲೀಲೆ ನಿದ್ರೆ ಹೋಗಿದ್ದಾಳೆ. ಆ ಬಿರಿದ ತುಟಿಗಳಲ್ಲಿ ಮುಗ್ಧ ನಗೆಯಿದೆ. ತುಂಬಿದ ಬಲದೋಳನ್ನು ದಿಂಬಿನ ಮೇಲಿಟ್ಟು ಅದರ ಮೇಲೆ ತನ್ನ ತಲೆ ಒರಗಿಸಿದ್ದಾಳೆ. ತಲೆಯ ಕಪ್ಪಗಿನ ಕೂದಲು ಆ ತೋಳಿಗೆ ಅಂಟಿಕೊಂಡು ಬೆಳ್ಳಗಿನ ತೋಳು, ಅಂದವಾದ ಮೊಗ ಇನ್ನಿಷ್ಟು ಎದ್ದು ಕಾಣುತ್ತಿವೆ. ಮುಚ್ಚಿದ ಕಣ್ಣೆವೆಗಳು ಕಣ್ಣು ಮುಚ್ಚಾಲೆಯಾಡುತ್ತಿರುವ ಹಾಗೆ ಭಾಸವಾಗುತ್ತದೆ.

" ದರಿದ್ರಳು........ ಇಷ್ಟೆಲ್ಲ ಇದ್ದೂ ಒಂದು ಒಳ್ಳೇಯ ಸೀರೆ ಉಡುವ ಭಾಗ್ಯವೂ ಇವಳಿಗಿಲ್ಲವಲ್ಲ! .... ಹಳೆಯ ಕಾಲದ ಆಭರಣಗಳನ್ನು ಮಾತ್ರ ಜೀವ ಹೋದರೂ ಬಿಡುವದಿಲ್ಲ "

ಏನೋ ವಿಚಾರ ಬಂದು ರಾಘು ಕೂಗಿದ.

' ಲೀಲಾ........ ಲೀಲಿ........ ಲೀಲಾ........ '

ಲೀಲೆ ಪತಿಯ ಕರೆಯನ್ನಾಲಿಸಿ ಎದ್ದು ಕುಳಿತಳು.

' ಏನು? '

' ಸ್ವಲ್ಪ ಚಹಾ ಮಾಡಿಕೊಂಬಾ. ಇದೆಲ್ಲಾ ಕೆಲಸ ಬೆಳಗಾಗೂದ್ರಾಗ ನಾ ಮುಗಸಬೇಕಾಗೇದ. '

' ರಾತ್ರಿ ಹಿಂಗ ಜಾಗರಣಿ ಮಾಡತೀರಿ. ಮ್ಯಾಲೆ ಚಹಾ ಕುಡದರಂತೂ ಆಗ್ಯಾ ಹೋತು. ಪ್ರಕೃತಿ ಎದಕ ಬರಬೇಕು? '

ಬರಿಯ ಒಂದು ನಗೆ ನಕ್ಕ ರಾಘು. ಲೀಲೆ ಹಾಗೆಯೆ ತನ್ನ ಮಾತನ್ನು ಮುಂದುವರಿಸಿದಳು.

' ಆ ಹಾಳ ಸಿಗರೇಟ ಬ್ಯಾರೆ ಸೇತ್ತ್ರಿರಿ. ನಾಳೆ ಕೆಲಸ ಮಾಡಿದ್ರ ಬರೂದುಲ್ಲೇನು ಅಷ್ಟೇನ ಇವತ್ತ ಅವಸರೇನು ? '

' ಅವಸರದ್ದೇ ಅಂತ ನಾ ನಿನಗ ಹೇಳೂದು. ನನ್ನ ಗೆಳೆಯ ರಾಮ ತನ್ನೂರಿಗೆ ಬರಬೇಕಂತ ಪತ್ರಾ ಬರದಾನ. ಒಂದ ತಿಂಗಳ ರಜಾ ಎಲ್ಲಾ ಅವನ ಹತ್ರೇ ಕಳೆಯೂದು. ಅದಕ ಇಷ್ಟು ಕೆಲಸ ಇವತ್ತೇ ಮುಗಿಸಿ ನಾಳೆ ಮೋಕಳೀಕ ಆದೆನಂದ್ರ ಅಲ್ಲಿಗೆ ಹೋಗಲಿಕ್ಕೆ ಬರತದ. '

ಲೀಲೆಗೆ ರಾಘು ಹೇಳುತ್ತಿರುವದೆಲ್ಲ ಕನಸಾಗಿ ತೋರಿತು. ಅವಳೆಷ್ಟೋ ಸಲ ತನ್ನ ತವರು ಮನೆಗೆ ಹೋಗೋಣವೆಂದಿದ್ದರೂ ' ಥೂ— ಆ ಕೊಂಪಿಗೆ ಯಾರ ಹೋಗಬೇಕು? ' ಎಂದು ಸಮ್ಮತಿಸಿದ್ದಿಲ್ಲ. ಯಾವ ಹಳ್ಳಿಗೂ ತನ್ನ ಗಂಡ ಹೊರಡಲಾರನೆಂದು ಮನದಲ್ಲಿ ಗಟ್ಟಿಮುಟ್ಟಾಗಿ ನಿಶ್ಚಯಿಸಿಕೊಂಡ ಲೀಲೆ ಅವನ ಇಂದಿನ ಮಾತುಗಳನ್ನು ಕನಸಿನಲ್ಲಿ ಕೇಳಿದ ಹಾಗೆ ಭಾವಿಸಿ ಕೊಂಡಳು.

' ಮೊದಲ ಚಹಾ ಮಾಡಿಕೊಂಬಾ. ಆ ಮ್ಯಾಲೆ ಎಲ್ಲಾ ವಿಷಯನೂ ಹೇಳತೀನಿ. '

ಲೀಲೆ ಚಹ ಮಾಡಿಕೊಂಡು ಬಂದಳು. ರಾಘು ಉತ್ಸಾಹಿತನಾಗಿ ಹೇಳಲಾರಂಭಿಸಿದ.

' ನೀನೂ ನನ್ನ ಕೂಡ ಬರಬೇಕು ಲೀಲಾ. ರಾಮ ನಿನ್ನ ಕರಕೊಂಬಾ ಅಂತ ಬರದಾನ ಬರೂಮುಂದ. ಅವರವ್ವನೂ ನಮ್ಮನ್ನ ನೋಡಬೇಕಂತ ಇಷ್ಟಪಡತಾಳಂತ. ಬರತೀಯೇನು ಲೀಲಾ? '

' ಅವರ ಊರೆಲ್ಲಿದ್ದೇ? '

' ಹಾಳ ಕೊಂಪಿ ಅದು. ಗೆಳೆಯ ಇದ್ದಾನಂತ್ಲೇ ಅಲ್ಲಿಗೆ ಹೋಗ ಬೇಕಾಗೇದ. '

ರಾಘು ಚಹಕುಡಿದು ಮುಗಿಸಿ ಸಿಗರೇಟನ್ನು ಬಾಯಿಗಿಟ್ಟುಕೊಳ್ಳುತ್ತ ಹೇಳಿದ.

' ಹಳ್ಳಿಗೆ ಬರತೀರ್‍ಯೇನು ನೀವು? '

' ಬರಬಾರದೇನು ಲೀಲಾ? '

ಮುಗುಳು ನಗೆ ನಗುತ್ತ ರಾಘು ಸಿಗರೇಟಿನ ಹೊಗೆಯನ್ನು ಬಾಯ್ತುಂಬ ಬಿಟ್ಟು ಕೇಳಿದ. ಈ ಪ್ರಶ್ನೆಯಿಂದ ಲೀಲೆ ನಿರುತ್ತರಳಾದಳು. ಲೀಲೆಗೆ ಅವನ ಮಾತುಗಳೆಲ್ಲ ಒಳ್ಳೇ ವಿಚಿತ್ರವಾಗಿ ತೋರಲಾರಂಭಿಸಿದವು. ಅವಳು ಕನಸು-ಮನಸ್ಸಿನಲ್ಲಿಯೂ ಕೇಳಲಾರದ ಮಾತುಗಳು ಇಂದು ರಾಘುವಿನ ಕೊರಲಿನಿಂದ ಹೊರಹೊಮ್ಮುತ್ತಲಿದ್ದವು. ಹಳ್ಳಿಯ ಹೆಸರನ್ನು ಕೇಳಿದರೆ ಉರಿದು ಬೀಳುತ್ತಿದ್ದ ರಾಘು, ಹಳ್ಳಿಯ ಜನಗಳೆಂದರೆ ಹುಂಬರು ಎಂದು ಎಣಿಸಿದ್ದ. ಅವಳ ಪತಿ- ಅಂತಹ ಹಳ್ಳಿಯೊಂದಕ್ಕೆ ಹೊರಡುವ ನಿರ್ಧಾರ ಮಾಡಿದ್ದಾನೆ. ಹಳ್ಳಿಯ ದರ್ಶನ ಪಡೆಯಲು ಆತುರ ಪಡುತ್ತಲಿದ್ದಾನೆ. ಜತೆಗೆ ಅವಳಿಗೂ ತನ್ನ ಸಂಗಡ ಬರಲು ಒತ್ತಾಯಗೊಳಿಸುತ್ತಲಿದ್ದಾನೆ. ”

ಲೀಲೆ ರಾಘುವನ್ನೆ ಅಚ್ಚರಿಪಟ್ಟುಕೊಂಡು ಎವೆಯಿಕ್ಕದೆ ನೋಡುತ್ತ ಕೇಳಿದಳು.

‘ ಎಂದ ಹೋಗೂದು ? ’

‘ ಇನ್ನ ಎರಡ ದಿವಸಕ್ಕ ’

ಮತ್ತೆ ಅವರ ಕುಳಿತಲ್ಲಿ ಮೌನ ತನ್ನ ತಲೆಚಾಚಿತು. ರಾಘು ಅರ್ಧ ಉಳಿಸಿದ್ದ ಕೆಲಸವನ್ನೆಲ್ಲ ಮುಗಿಸಿ ಬಿಡಲು ಮತ್ತೆ ಕೈಯಲ್ಲಿ ಪೆನ್ನನ್ನು ಹಿಡಿದ. ಲೀಲೆ ತನ್ನ ಹಾಸಿಗೆಯ ಮೇಲುರುಳಿದಳು. ಒಡೆಯಲಾರದ ಒಗಟಿನಂತೆ ರಾಘು ಹಳ್ಳಿಗೆ ಹೊರಡುವ ಸಮಾಚಾರ ಅವಳ ಹೃದಯದಲ್ಲಿ ಅಚ್ಚೊತ್ತಿದಂತೆ ನಿಂತಿತ್ತು. ಮನದ ಸಂಗೀತ ಅದಕ್ಕೆ ಸ್ವರಗೂಡಿಸಿತ್ತು.

‘ ಹಳ್ಳಿಗೆ ಹೊರಡುವದು! ’

ಲೀಲೆಗೆ ಮಲಗಿದಲ್ಲಿಯೆ ನಗು ಬಂತು. ಪತಿಯು ಪಕ್ಕದಲ್ಲಿರುವನೆಂಬ ವಿಚಾರದಿಂದ ಅವಳು ಗಟ್ಟಿಯಾಗಿ ನಗಲಿಲ್ಲ ಅಷ್ಟೆ.

‘ ಅಬ್ಬ ! ಹಳ್ಳಿಯನ್ನು ಜನ್ಮದಲ್ಲಿಯೆ ನೋಡಲಾರೆನೆಂದು ಶಪಥ ಮಾಡಿದ್ದ, ಇವರ ಮನಸ್ಸನ್ನು ಬದಲಿಸಿದ ಅವನ ಗೆಳೆಯರು ಎಂತಹ ಸತ್ವಶಾಲಿಗಳಿರಬೇಕು!........ ಎಷ್ಟು ದೊಡ್ಡ ಮನಸ್ಸಿನವರಿರಬೇಕು!!.........

‘ ಓ,........ ಮದುವೆಗೆ ಅವರು ಬಂದಿದ್ದರು........ ಮನೆಯ ಹಿರಿಯರಿಗಿಂತಲೂ ಹೆಚ್ಚಾಗಿ ದುಡಿದರು........ ಆ ಕುಳ್ಳನೆಯ ವ್ಯಕ್ತಿಯನ್ನು ನಾನು

ಇವರ ಸಹೋದರರೆಂದೇ ಭಾವಿಸಿದ್ದೆ........ ಮದುವೆ ಮುಗಿದು ಅವರು ಹೊರಟು ನಿಂತಾಗ ನನ್ನ ಭಾವನೆ ತಪ್ಪು ಎಂದು ತಿಳಿಯಿತು........ ಹೋಗು ವಾಗ ಅವರು ನನ್ನನ್ನು ಕರೆದು ಹೇಳಲಿಲ್ಲವೆ?........

'ತಂಗಿ, ಇನ್ನ ನನ್ನ ಗೆಳೆಯ ನಿನ್ನ ಗಂಡ........ ಅವನ ಗೆಳೆಯ ನಾನು ಹಳ್ಳಿಗೆ ಹೋಗತೀನಿ ಅವನ್ನ ಬಿಟ್ಟು........ ಅವನ ಗೆಳತಿ ಆಗಿ ನೀನು ಹೆಳ್ಳಿಬಿಟ್ಟ ಇಲ್ಲಿಗೆ ಬಂದೀದಿ........ ನನ್ನ ಸ್ಥಾನದಾಗ ಬರೂ ನೀನೂ ನನ್ಹಂಗs ಅವನ್ನ ನೋಡಿಕೋತಿ ಅಂತ ನಂಬತೀನಿ........'

'ಎಷ್ಟು ಹೃದಯ ತುಂಬಿದ ಮಾತು ಅದು!........ ನನ್ನಣ್ಣನೊಬ್ಬ ಇದ್ದಿದ್ದರೆ ಇಷ್ಟು ಹಚ್ಚಿಕೊಂಡು ಹೇಳುತ್ತಿದ್ದನೊ ಇಲ್ಲವೋ!........ ನಾನು ಏನನ್ನೂ ಹೇಳಲಾರದೆ ಅವರಿಗೆ ನಮುಸ್ಕರಿಸಿದೆ........ ಅಣ್ಣನಂತೆ ಅವರು ಹೃದಯ ತುಂಬಿ ಹರಸಿ ಹೋದರು........

'ಅವರಿಟ್ಟ ನಂಬಿಕೆ ಸಾರ್ಥಕವಾಯಿತೆ? ........'

ಅವಳ ಹೃದಯ ಅದೇ ಪ್ರಶ್ನೆಯನ್ನು ಎರಡು ಮೂರು ಸಲ ಹಾಕಿತು. ಅದಕ್ಕೆ ಉತ್ತರಿಸುವ ಚೈತನ್ಯ ಅವಳಿಗಿರಲಿಲ್ಲ. ಬರಿಯ ನಿಡಿದಾದ ಉಸಿರೊಂದು ಮೆಲ್ಲನೆ ಹೊರಹೊಮ್ಮಿತು ಅವಳಿಂದ. 'ಇವರು ತೊಟ್ಟು ನಿಂತ ಹಟದ ಮುಂದೆ ಅವರಿಟ್ಟ ನಂಬಿಕೆಯನ್ನು ನಾನು ಹೇಗೆ ಸಾರ್ಥಕ ಪಡಿಸುವದು?........ ಕಾಮಣಿಯಾದವರ ಕಣ್ಣಿಗೆಲ್ಲ ಪ್ರಪಂಚವೆ ಹಸುರಾಗಿ ತೋರುವ ಹಾಗೆ ಇವರಿಗೆ ಹಳ್ಳಿಯವರೆಲ್ಲ ಅಜ್ಞಾನಿಗಳು, ಮಬ್ಬುಮಂದಿಯಾಗಿ ತೋರುತ್ತಾರೆ........ ಹಾಗಿದ್ದ ಮೇಲೆ ಈ ಇವರ ಕಾಮಣಿ ಗುಣವಾಗುವದು ಹೇಗೆ?........ ಔಷಧ, ಉಪಚಾರ ನಾಟದಿದ್ದ ಮೇಲೆ ಯಾವ ರೋಗ ಗುಣವಾದೀತು?........

'ಹಳ್ಳಿಗೆ ಹೋಗುತ್ತೇವೆ........ ರಾಮಣ್ಣನವರೇ ವೈದ್ಯರಾಗಿ ಇವರ ಕಾಯಿಲೆ ಕಡಿಮೆ ಮಾಡಲಿ........ ಅವರ ಪುಣ್ಯದಿಂದಲಾದರೂ ನಮ್ಮ ಬಾಳು ಬೆಳಗಲಿ!........ ಈ ಅರೆಯಾಳಿನ ಜೀವನ ಕೊನೆಗೊಳ್ಳಲಿ........!!!

ಮಲಗಿದಲ್ಲಿಯೆ ಲೀಲಾ ನೆಮ್ಮದಿಯ ಉಸಿರೆಳೆದಳು. ಬೀಸಿ ಬರುವ ತಂಗಾಳಿಗೆ ಅವಳ ಕಣ್ಣು ಮುಚ್ಚಲಾರಂಭಿಸಿದ್ದವು. ಒಂದೇ ಸವನೆ ಗೀಚುತ್ತ ಅತ್ತ ಅವಳ ಪತಿ ಕುಳಿತೇ ಇದ್ದ. ಮುಂದೆ ಸ್ವಲ್ಪ ಹೊತ್ತಿನಲ್ಲಿಯೆ ಅವಳಿಗೆ ನಿದ್ರೆಯಾವರಿಸಿತು.

ಅವಳ ಕನಸಿನಲ್ಲಿ ಎಂತಹ ಭವ್ಯ ದೃಶ್ಯ !

ತುಂಬ ಮುತ್ತೈದೆ ಬನಶಂಕರಿ- ಹರುಷದ ತೊಟ್ಟಿಲಲ್ಲಿ ಪವಡಿಸಿದ ಲೀಲೆಯನ್ನು ತೂಗುತ್ತ ಜೋಗುಳ ಹಾಡುತ್ತಲಿದ್ದಾಳೆ.

'ಮುತ್ತೈದೆ ಸಾವಿತ್ರಿಯಾಗು
ಬಾಳಿ ಮಗಳೆ
'ಹಡೆದ ಮನೆ- ಪಡೆದ ಮನೆಗಳ
ಬೆಳಗು ಮಗಳೆ
'ಹಣ್ಣ ಹೂವ ಸುರಿದ ಬದುಕ'
ನಿನ್ನದಾಗಲಿ'
'ಸುರೇಪಾನ ಹೂವಿನ್ಹಂಗ—'
ಬಾಳರಳಲಿ !!

೨

ಶರದೃತುವಿನ ಪುಣ್ಯದಿಂದ ಚಳಿ ವಿಶ್ವದಲ್ಲೆಲ್ಲ ತನ್ನ ವೈಚಾಚಿ ನಿಂತಿದೆ. ಜೀವವಿರುವ ಪ್ರಾಣಿಗಳು ಹೋಗಲಿ, ಜೀವವಿಲ್ಲದ ಬೆಟ್ಟ, ಕಾಡುಗಳಲ್ಲಿಯ ಗಿಡಗಳೂ ಗಾಳಿಯ ಮೊರೆತಕ್ಕೆ ನಡುಗುತ್ತಿವೆ. ನಿಸರ್ಗದ ನಿತಾಂತ ಚೆಲುವು ಕಣ್ಣಿಗೆ ಹಬ್ಬ ನೀಡುತ್ತಿತ್ತು. ನಿರಾಭರಣ ಸುಂದರಿಯಂತೆ ಪ್ರಕೃತಿದೇವಿ ಮಿರಮಿರನೆ ಮಿಂಚುತ್ತಲಿದ್ದಾಳೆ.

ಅಂತಹ ಒಂದು ದಿನದ ಆರುತಾಸು ಕಳೆದು ಹೋಗಿದೆ. ರಾಮುವಿನ ಚಕ್ಕಡಿ ಕಾಡುದಾರಿಯನ್ನು ಬಳಸಿಕೊಂಡು, ಗುಣಿಗಲ್ಲುಗಳ ಮೇಲೆ ಉರುಳುತ್ತ ನಡೆದಿದೆ. ಊರಿಗಭಿಮುಖವಾಗಿರುವ ಎತ್ತುಗಳೂ ತ್ವರಿತ ಗತಿಯಿಂದ ಸಾಗಿವೆ. ಬಂಡಿ ಮುಂದೆ, ಮುಂದೆ ಹೋದ ಹಾಗೆ ಹಿಂದೆ ಧೂಳು ಮೇಲೇಳುತ್ತದೆ. ಬೀಸಿದ ಗಾಳಿಗೆ ಸ್ವಲ್ಪ ಹೊಯ್ದಾಡಿ ಮತ್ತೆ ಅದೇ ಕಾಡು ದಾರಿಯಲ್ಲಿ ಸಮರಸವಾಗುತ್ತದೆ. ಎತ್ತುಗಳ ಕೊರಳಲ್ಲಿರುವ ಗೆಜ್ಜೆಸರಗಳ ಜತೆಗೆ ಚಕ್ಕಡಿಯ ಕೀಲುಗಳ ವಂಕಿಗೆ ನೇತು ಬಿಟ್ಟ ಗೆಜ್ಜೆಗಳೂ ತಮ್ಮ ಅಲ್ಪ ಸ್ವರ ಬೆರಿಸಿ ಘುಲು ಘುಲಿಸುತ್ತಿವೆ. ಆ ಸ್ವರಕ್ಕೆ ಸಂಗೀತದ ಸೂರು ಮೇಳೈಸುವ ಹಾಗೆ ದನ, ಕುರಿಗಳನ್ನು ಕಾಯುವ ಹಳ್ಳಿಯ ಹುಡುಗರು ಕೊಳಲು ನುಡಿಸುತ್ತಿದ್ದಾರೆ.

ರಾಮುವಿಗೆ ಅವೆಲ್ಲ ಅಪರಿಚಿತವಲ್ಲದಿದ್ದರೂ ರಾಘುವಿಗೆ ಅಪರಿಚಿತ. ಆದರೂ ರಾಘು ಚಳಿಯ ಮೂಲಕ ಅಷ್ಟೆಲ್ಲ ಬಟ್ಟೆ ಧರಿಸಿದರೂ ನಡುಗುತ್ತಲಿದ್ದಾನೆ. ರಾಮು ಕೇಳಿದ ಹಾಡನ್ನೆ ಕೇಳಿದರೂ ಅದರಲ್ಲಿಯ ಕಂಠಶ್ರೀಗೆ ತಲೆದೂಗುವ ಹಾಗೆ ತಲೆದೂಗುತ್ತಲಿದ್ದಾನೆ. ಮನದಲ್ಲಿಯ ಜೋಳು, ಬೋಳಾಗಿ ನಿಂತ ಹೊಲಗಳನ್ನು ಸುಮ್ಮನೆ ಕುಳಿತುಕೊಳ್ಳಲಾರದೆ ಲೀಲೆ ನಿರುಕಿಸುತ್ತಲಿದ್ದಾಳೆ.

ಚಳಿ ತಡೆಯಲಾರದೆ ಮತ್ತೆ ಒಂದು ಸಿಗರೇಟನ್ನು ಹೊತ್ತಿಸಿದ ರಾಘು. ರಾಮು ಅವನನ್ನು ನೋಡುತ್ತ ಹೇಳಿದ.

'ಅಲ್ರೊ ಮಾರಾಯ್ರ ಈ ಜಟ ಏನ ಭಾಳ ಆದ್ಹಂಗ ಕಾಣಸ್ತದಲ್ಲ?

'ಅನ್ಯಾಯದ ದುಡ್ಡು ಸುಟ್ಟು ಹೋಗತದ'

ರಾಘು ನಗುತ್ತ ಹೇಳಿದ. ಲೀಲಾ ನಡುವೆ ಹೇಳಿದಳು.

'ಅದೆಲ್ಲ ಖರೆ, ಆದರ ದುಡ್ಡ ಸುಟ್ಟ ಹೋಗೂದ್ರಾಗ ಪ್ರಕೃತಿ ಸುಟ್ಟ ಹೋಗತಾವಲ್ಲ ?'

'ನಿಕ್ನ ಪ್ರಕೃತಿ ಸುಟ್ಟ ಹೋಗೂ ಕೊರಗಿನ್ಯಾಗ ನಿನ್ನ ಮನಸೂ ಸುಟ್ಟ ಹೋಗತದ. '

ರಾಘು ಪತ್ನಿಯೆಡೆಗೆ ತಿರುಗಿ ನಗೆಯಾಡಿದ. ಲೀಲೆ ಕೆಣಕುವ ಸ್ವರದಲ್ಲಿ ಹೇಳಿದಳು.

'ಭಾಳ ಹಂಗ್ರ. ಏನ್ ಹೇಳೂ ಹಂಗಿಲ್ಲ!'

ಅಷ್ಟರಲ್ಲಿಯೆ ರಾಮುವಿನ ಮನೆಯ ಮುಂದೆ ಬಂಡಿ ಬಂದು ನಿಂತಿತು. ಎಲ್ಲರೂ ಕೆಳಕ್ಕಿಳಿದರು. ಬಂಡಿ ಹೊಡೆಯುತ್ತಲಿರುವ ಭರಮು ಎತ್ತಿನ ಕೊಳ್ಳು ಹರಿದು ಅಲ್ಲಿಯೆ ನಗಕ್ಕೆ ಕಟ್ಟಿ ಅದರಲ್ಲಿಯ ಎಲ್ಲ ಸಾಮಾನುಗಳನ್ನು ತೆಗೆದುಕೊಂಡು ಒಳಗಿಡಲು ಸನ್ನದ್ಧನಾದ.

ರಾಘು, ಲೀಲೆ, ರಾಮು ಪಡಶಾಲೆಯಲ್ಲಿ ಬಂದು ಕುಳಿತುಕೊಂಡರು. ಅಷ್ಟರಲ್ಲಿಯೆ ರಿಂದಕ್ಕ ಅಲ್ಲಿಗೆ ಬಂದರು. ಕಣ್ಣು ಹಿಡಿಸಲಾರದೆ ರಾಘು, ಲೀಲೆಯರನ್ನು ನೋಡುತ್ತ ಸಂತೋಷದ ಸ್ವರದಲ್ಲಿ ಹೇಳಿದರು.

'ಬಂದ್ರ್ಯಾ ರಾಘಣ್ಣಾ ನಿಮ್ಮನ್ನ ನೋಡಿ ನನಗ ಭಾಳ ಸಂತೋಷಾತು ಎಲ್ಲಾ ನೆಟ್ಟಗs ?'

ಒೀಗೆ 'ವಡ ವಡ' ಮಾತನಾಡುವದು ಹಳ್ಳಿಯ ಹೆಂಗಸರ ಸ್ವಭಾವ ಎಂದು ಅವನಿಗೆ ಅನ್ನಿಸುತ್ತಿದ್ದರೂ ರಾಮುವಿನ ತಾಯಿ ಅವರು ಎಂಬ ವಿಚಾರದಿಂದ ರಾಘು ಸರಳವಾಗಿಯೆ ಉತ್ತರವಿತ್ತ.

'ಎಲ್ಲಾ ನೆಟ್ಟಗದ ಕಕ್ಕಿ'

ಅಷ್ಟರಲ್ಲಿಯೆ ಸೀತಾ ಅತ್ತೆಯನ್ನು ಕರೆದಳು. ರಿಂದಕ್ಕ ಹೊರಟ್ಟು ಹೋದ ಒಂದೆರಡು ನಿಮಿಷಗಳಲ್ಲಿಯೆ ಚಹಾಕ್ಕಾಗಿ ಅವರನ್ನು ಕರೆದ್ರು ಕೊಂಡು ಅಡಿಗೆ ಮನೆಗೆ ನಡೆದರು. ಕೈಕಾಲು ತೊಳೆದುಕೊಂಡು ಗೆಳೆಯರು ಚಹ ಕುಡಿದ ಮೇಲೆ ರಾಘುವನ್ನೆಳೆದುಕೊಂಡು ತನ್ನ ಮನೆಯನ್ನೆಲ್ಲ ಒಂದು ಸಲ ಅಲೆದಾಡಿಸಿಕೊಂಡು ಬಂದ.

ರಾಘುವಿಗೆ ಎಲ್ಲವೂ ಅಚ್ಚರಿಯಾಗಿ ತೋರುತ್ತಿತ್ತು! ತಾನು ನಿಲ್ದಾಣದಿಂದ ಬಂದ ಆ ಕಾಡು ದಾರಿಯನ್ನು ನೆನೆದುಕೊಂಡ. ಜತೆಗೆ ಹಳೆಯ ಕಾಲದ ಚನ್ನಾಗಿ ಬೆಳಕು, ಗಾಳಿಗಳೂ ಆಡದ ಕಾಡಿಗೆಮಯವಾಗಿರುವ ಈ ರಾಮುವಿನ ಮನೆಯನ್ನೂ ನೆನೆದುಕೊಂಡ. ಇಂತಹ ದರಿದ್ರ ಸ್ಥಳದಲ್ಲಿ ಕಲಿತ ಸುಶಿಕ್ಷಿತ ಮನುಷ್ಯ ವಾಸವಾಗಿರುವದು ಅವನಿಗೆ ಮರಕವನ್ನುಂಟುಮಾಡಿತು. ಕಾಡಿನಲ್ಲಿರುವ ಮೃಗವನ್ನು ಹಿಡಿದು ತಂದು ಮೃಗಾಲಯದಲ್ಲಿ ಹಾಕಿದ ಹಾಗೆನ್ನಿಸಿತು ಅವನಿಗೆ.

'ಅಲ್ಲೊ, ಮಹರಾಯ– ನಿನಗ ಮತ್ತೆಲ್ಲೂ ಮಾಡಲಿಕ್ಕೆ ಕೆಲಸ್ವನ್ನ ಸಿಗೂದುಲ್ಲೇನು? ಇಂಥಾ ದರಿದ್ರ ಮನ್ಯಾಗ, ಕಾಡಿನಾಗಿದ್ದಂಗ ಹೆಂಗ ಇರತಿಯೊ ಏನೋಪ್ಪ

ರಾಘು ತನ್ನ ಮನದಲ್ಲಿ ಮೂಡಿದ ಸಂಶಯದ ಹೊತ್ತಿಗೆಯನ್ನು ಬಿಚ್ಚಿದ. ರಾಮು ಮಂದಸ್ಮಿತನಾಗಿ ಹೇಳಿದ.

'ಇಲ್ಲಿ ನೋಡ ರಾಘ್ಯಾ ನಿನ್ಹಂಗ ಗೋಪಾಳ ದಿವಸ್ಯ ಸಿಗತಿದ್ರ ನಾನೂ ಛಲೋ ಗಚ್ಚಿನ ಮನೀನ್ನ ಕಟ್ಟಸತಿದ್ದೆ, ಏನಪ, ಆದ್ರ ಇಲ್ಲೆ ಇದ್ದದ್ನ ಮಾಡಿಕೊಂಡ ಹೋಗಬೇಕಾದ್ರ್ನ ರಗಡಾಗತದ,'

'ಅಲ್ಲೊ ಮತ್ತ ನೀ ಹಿಂದ ಒಮ್ಮೆ' 'ನೀರಿನಕಟ್ಟೆ ಮಾಮಲೇದಾರ ಆಗೇನಿ ಅಂತ ಬರದಿದ್ದ್ಯಲ್ಲೊ? ಗೋಪಾಳಿಲ್ಲದ್ನ ನಿನ್ನ ಮಾಮಲೇತಿ ನಡಿತೇನಪ್ಪ?'

'ನಾ ಮಾಮಲೇದಾರ ಇರೂತನಕ ಗೋಪಾಳ ಸಿಕ್ಕಿತೇನಪ. ನಮ್ಮಪ್ಪನ ಜಡ್ಡ ಕಡಿವ್ಯಾದಮೇಲೆ ಮಾಮಲೇತೀನೂ ಹೋತು. ಗೋಪಾಳಾನೂ ನಿಂತ್ಯು.'

ಇಬ್ಬರೂ ಗಟ್ಟಿಯಾಗಿ ನಕ್ಕರು. ಆ ಮೇಲ ಅವರು ತಮ್ಮ ಸುಖ ದುಃಖದ ವಿಚಾರವಾಗಿ ಹರಟೆ ಹೊಡೆಯಲಾರಂಭಿಸಿದರು.

ಇತ್ತ ಲೀಲಳನ್ನು ಕರೆದು ತಂದ ರಿಂದಕ್ಕ ಪುರಿ ಕರಿಯುತ್ತ ಕುಳಿತ ಸೀತೆಗೆ ಹೇಳಿದರು.

'ಇಕಿನ್ನ ನೋಡ ಸೀತಾ, ನಮ್ಮರಾಘೂನ ಹೇಣ್ತಿ ಲೀಲಾ.'

ಉಬ್ಬಿನಿಂದ ಪುರಿಗಳನ್ನು ಪರಾತಕ್ಕೆ ಹಾಕುತ್ತ ಸೀತಾ ಒಂದು ಸಲ ಕತ್ತೆತ್ತಿ ಲೀಲಳನ್ನು ನೋಡಿದಳು.

ಅತ್ತೆಯವರ ಸಂಗಡ ನಿಂತಿದ್ದಳು ಲೀಲಾ. ಅವಳ ಮೊಗದಲ್ಲಿ, ಭಾವದಲ್ಲಿ, ನಿಂತ ಭಂಗಿಯಲ್ಲಿ ಅದೂ ಹೋಗಲಿ– ಉಡುಪಿನಲ್ಲೂ ಒಂದು ಗೆರೆಯನ್ನು ಕಾಣಲಿಲ್ಲ ಸೀತಾ. ನಗರದ ಜನರ ವಿನಹ ಉಳಿದವರು ಮನುಷ್ಯರೆಂದೂ ನಂಬಲಾರದ ಸೀತಳಿಗೆ ಲೀಲೆಯ ವಿಚಾರವಾಗಿ ಯಾವ ಆದರ, ಅಭಿಮಾನಗಳೂ ಉಂಟಾಗಲಿಲ್ಲ. ಪ್ರತಿಯಾಗಿ ತಿರಸ್ಕಾರದ ನಗೆ ಮಾತ್ರ ಅವಳ ತುಟಿಗಳಲ್ಲಿ ಮಿನುಗಿತು.

ಲೀಲೆ ಅದೇ ವೇಳೆಗೆ ಸೀತಳನ್ನು ನೋಡಿದಳು. ಬನಾರಸದ ನೀಲ ವರ್ಣದ ಪತ್ತಲ ಉಟ್ಟು, ಶುಭ್ರವಾದ ಕೆಂಗುಲಾಬಿಯ ಮಕಮಲ್ಲಿನ ಬ್ಲೌಜು ತೊಟ್ಟು ಒಲೆಯ ಮುಂದೆ ಪುರಿ ಕರಿಯುತ್ತ ಕುಳಿತ ಸೀತಳ ಬೆಳ್ಮೊಗ ಒಲೆಯ ಜ್ವಾಲೆಯಲ್ಲಿ ಬೆಳಗುತ್ತಿತ್ತು. ಹಾಳು ಒಲೆಯಲ್ಲಿಯ ಜ್ವಾಲೆ ಕಡಿಮೆಯಾಗಬೇಕೆ? ಅದೇ ಸಮಯಕ್ಕೆ 'ಊದುಗೊಳವಿ' ಹಿಡಿದು ನಾಲ್ಕಾರು ಬಾರಿ ಊದಿದಳು. ಗಾಳಿಗೆ ಅಲ್ಲಿಯ ಹೊಗೆಯೆಲ್ಲ 'ಊದುಗೊಳವಿ'ಯಿಂದ ಅವಳ ಬಾಯಿಗೂ, ಮೇಲೆದ್ದ ಹೊಗೆ ಕಣ್ಣಿಗೂ ತಾಗಿ ಕೆಮ್ಮು ಬಂದು, ಕಣ್ಣಲ್ಲಿ ನೀರೂ ಕಾಣಿಸಿಕೊಂಡಿತು. ಅದನ್ನು ಕಂಡ ಲೀಲೆ ಸೀತೆಗೆ ಅಡಿಗೆ ಮಾಡುವ ಅನುಭವ ಸಾಕಷ್ಟಿಲ್ಲವೆಂದು ಖಚಿತಪಡಿಸಿಕೊಂಡರೂ ನಗಲಿಲ್ಲ. ಪ್ರತಿಯಾಗಿ ಸೀತೆಯ ಮೃದು ಕಪೋಲಗಳ ಮೇಲೆ ನಿಂತ ಬೆವರು ಹನಿಗಳನ್ನು ಕಂಡು ಮರುಕ ಉಂಟಾಯಿತು.

'ನಮಸ್ಕಾರ ಲೀಲಾ.'

ನಮಸ್ಕಾರ ಸೀತಾ.'

ಲೀಲಾ ಸ್ನೇಹ, ಅಂತಃಕರುಣ, ಮಮತೆಗಳ ಸಂಗಮಧ್ವನಿಯಲ್ಲಿ ಹೇಳಿದ್ದರೆ ಸೀತಾ ಕೇವಲ ಉಪೇಕ್ಷೆಯಿಂದ ಆದರೂ ಮನೆಗೆ ಬಂದ ಹಿರಿಯ ಅತಿಥಿ ಎಂಬ ದೃಷ್ಟಿಯಿಂದ ಹೇಳಿದ್ದಳು. ಒಬ್ಬರನ್ನೊಬ್ಬರು ಒಂದೇ ಚಣದ ಪರಿಚಯದಿಂದ ಗುರುತಿಸಲಾರದ ಹಾಗೆ ಒಬ್ಬರನ್ನೊಬ್ಬರ ಧ್ವನಿಯ ವಿಡಿತ ವನ್ನೂ ಗುರುತಿಸಲಾರದವರಾಗಿದ್ದರು.

'ಕೂಡ್ರವ ಲೀಲಾ'

ರಿಂದಕ್ಕ ಅಕ್ಕರೆಯಿಂದ ಹೇಳಿ ತಮ್ಮ ಮುಂದೆಯೆ ಅವಳನ್ನು ಕುಳ್ಳಿ ರಿಸಿಕೊಂಡರು, ಹಾಗೆಯೆ ತಮ್ಮ ಮಾತನ್ನು ಮುಂದುವರಿಸಿದರು.

'ನಿಮ್ಮನ್ನ ನೋಡಿ ನನಗ ಸಂತೋಷಾತವ. ರಾಮ ದಿವಸಕ್ಕ ಒಮ್ಮೆರ ಈ ನಿನ್ನ ಗಂಡನ್ನ ನೆನಸತಾನ, ಅಂತಾ ಗೆಳೆಯ ಅವ. ಬಂಗಾರ ದಂತಾ ಹುಡುಗ. ಅವಗ ನೀ ಹೂವಿನಂತಾ ಹುಡಗಿ. ನಿಮ್ಮನ್ನ ನೋಡಿದರ ಸಾಕ್ಷಾತ್ ರಾಮ-ಸೀತಾನ್ನ ನೋಡಿದ್ಹಂಗ ಅನಸತದ.'

ರಿಂದಕ್ಕ ಹೃದಯ ತುಂಬಿ ಹೇಳಿದರು. ಸೀತಾ ಮಾತ್ರ ಅವರ ಈ ಮಾತಿಗೆ ವ್ಯಂಗ್ಯನಗೆಯೊಂದನ್ನು ಬೀರಿದಳು ಮಾತ್ರ. ರಿಂದಕ್ಕ ಲೀಲಾಳಿಗೆ ಅತ್ತ ಗಮನ ವಿರಲಿಲ್ಲ. ಅವರ ಮಾತು ಕೇಳಿ ತನ್ನ ತಾಯಿಯ ಹೃದಯವೆ ಹಾಗೆ ಹೇಳಿದ ಹಾಗೆ ಭಾವಿಸಿಕೊಂಡ ಲೀಲೆ ಸಂತೋಷದಿಂದ ಹೇಳಿದಳು.

'ಎಲ್ಲ ನಿಮ್ಮ ಹಿರೇರ ಆಶೀರ್ವಾದ ಅಷ್ಟ.'

'ನನ್ನ ಆಶೀರ್ವಾದ ಯಾತರದವ್ವ- ಎಲ್ಲಾ ಸ್ವಾಮಿ ಕೃಪಾ. ಅವನ ಕೃಪಾದಿಂದ ಮುತ್ತೈದು ಸಾವಿತ್ರಿ ಆಗಿ ಬಾಳು ... ನಾಕಮಕ್ಕಳ ತಾಯಾಗು....'

' ನಾಕಮಕ್ಕಳ ತಾಯಾಗೂದು ಹಳ್ಳಿಯ ಮುಂದಿಗೆ ಒಳೆ ಹುಡಗಾಟನ ಆಗೇದ!' ಎಂದುಕೊಂಡು ಸೀತೆ ಅಡಗಿ ಮಾಡುತ್ತಿರುವಾಗಲೇ ಒಳಗೊಳ ಗೆಯೆ ನಕ್ಕಳು ಲೀಲೆ ಹೃತ್ಪೂರ್ವಕವಾಗಿ ರಿಂದಕ್ಕನವರ ಆಶೀರ್ವಾದವನ್ನು ತಲೆಯಲಾಂತಳು. ತಾಯಿಯೆ ಕುಳಿತು ಹಾಗೆ ಆಶೀರ್ವಾದ ಮಾಡುತ್ತಿದ್ದ

ಳಿಂದು ಭಾವಿಸಿಕೊಂಡ ಭಾವಿಕ ಹೃದಯದ ಲೀಲಾ ಮೆಲ್ಲನೆ ಅವರ ಪಾದಗಳಿಗೆ ಹಣೆ ಇಟ್ಟಳು. ಅವಳ ಕಣ್ಣಿನಿಂದ ಆನಂದಾಶ್ರುಗಳು ಕಳಚುತ್ತಿದ್ದವು. ಹೃದಯ ತುಂಬಿ ಹೇಳಿದಳು ಲೀಲಾ.

'ಇದು ನನ್ನ ತಾಯಿಽ ಹರಕಿ.'

'ಲೀಲಾಽ.'

'ಅವ್ವಽಽ.'

ರಿಂದಕ್ಕನವರ ಕಂಗಳಿಂದಲೂ ಒಂದೆರಡು ತೊಟಕುಗಳು ಕಳಚಿದವು. ಅವರು ಮೆಲ್ಲನೆ ಲೀಲಾಳನ್ನೆತ್ತಿ ಮೈದಡವಿ ಹೇಳಿದರು.

'ನನಗ ಮಗಳಿದ್ದಿಲ್ಲ ಲೀಲಾ ನೀ ಆ ಕೊರತೆ ತುಂಬಿ ಕೊಟ್ಟಿ.'

ತಾಯಿ ಮಗಳಂತೆ ಒಂದೇ ಚಣಕ್ಕೆ ಸಮರಸರಾದ ಅವರನ್ನು ನೋಡಿ ಸೀತಳಿಗೆ ಒಳ್ಳೆ ಮೋಜೆನ್ನಿಸಿತು. ಜತೆಗೆ ನಗು ಬಂದಿತು. ನಗೆ ತಡೆಯಲಾರದೆ ಸೀರೆಯ ಸೆರಗಿನಿಂದ ಬಾಯಿ ಮುಚ್ಚಿ ಕೊಂಡಳು. ಈ ಬುದ್ಧಿ ಇಲ್ಲದ ಹಳ್ಳಿಯ ಜನರೇ ಹೀಗೆ. ಅಬ್ಬಬ್ಬಽ....' ಎಂದು ಕೊಂಡಳು. ಹಾಗೆಯೇ ಅವರ ಹುಚ್ಚನ್ನು ಬಿಡಿಸಬೇಕೆಂದು ಸೀತೆ ಗಟ್ಟಿಯಾದ ಸ್ವರದಲ್ಲಿ ಹೇಳಿದಳು.

'ಉಶ್....ಶ್....ಶ್....'

ಲೀಲ–ರಿಂದಿಕ್ಕ ಸೀತೆಯೆಡೆಗೆ ಹೊರಳಿದರು ಅವಳು ನಗುತ್ತ ಹೇಳಿದಳು.

'ಬೆಕ್ಕ ಬಂದಿತ್ತು. ಹಾಲಿನ ಪಾತ್ರಿ ತೆಳಗಽ ಇಟ್ಟೀರಲ್ಲಽ.'

ಎಂದು ನಗೆ ತಡೆಯಲಾರದೆ ಹಾಲಿನ ಪಾತ್ರೆಯನ್ನು ಎತ್ತಿ ಕಪಾಟಿನಲ್ಲಿಟ್ಟು ಅತ್ತ ಮೊಗಮಾಡಿಯೆ ನಕ್ಕಳು ಕಳ್ಳಿಯ ಹಾಗೆ.

'ಅಡಿಗಿ ಆಗೇದಿಲ್ಲೊ, ಸೀತವ್ವಽ ?'

ರಿಂದಕ್ಕ ಸೊಸೆಯನ್ನು ಸ್ವಾಭಾವಿಕವಾಗಿ ಕೇಳಿದರು ಅದನ್ನು ಗುರುತಿಸಲು ಶಕ್ತಿಯಿಲ್ಲದ ಸೀತ ಮೊಗ ಸಿಂಡರಿಸಿಕೊಂಡು ಹೇಳಿದಳು.

'ಆಗುದ್ರಾಗದ಼.'

ರಿಂದಕ್ಕನವರ ಆ ಪ್ರಶ್ನೆಗೆ ಸೀತ ಒರಟಾಗಿ ಉತ್ತರ ವಿತ್ತಳು. ಅವಳ ಹುಚ್ಚು ಮನಸ್ಸು—ತಾನು ನಗರದಲ್ಲಿದ್ದೇ ಪರಿಪೂರ್ಣಳಾಗಿದ್ದೇನೆ. ತನಗೆ ಹೇಳುವ ಅಧಿಕಾರ ಈ ಹಳ್ಳಿಯ ಅತ್ತೆಗೆಲ್ಲಿ?- ಎಂದು ಕುದಿದೆದ್ದಿತು. ಅದರಲ್ಲೂ ಲೀಲಾಳೆದುರು ಹಾಗೆ ಕೇಳಿದ್ದು ತನ್ನನ್ನು ಅವಮಾನ ಗೊಳಿಸಲಿಕ್ಕೇ ಎಂದವಳು ಭಾವಿಸಿದಳು. ಸೀತೆ ಹೀಗೆ ಹೊಯ್ದಾಟದಲ್ಲಿರುವಾಗಲೇ ಅವಳ ದೃಷ್ಟಿ ನೆಲದ ಮೇಲೆ ಕುಳಿತ ಲೀಲೆಯೆಡೆಗೆ ತಿರುಗಿತು. -ಮಣೆಯ ಮೇಲೂ ಕುಳಿತು ಕೊಳ್ಳಲು ಬರಲಾರದ ಈ ಹುಡಿಗಿ ರಾಘಣ್ಣನ ಹೃದಯ ಸಿಂಹಾಸನದ ಮೇಲೆ ಏಸು ಕುಳಿತೀತು ಮಣ್ಣು!' ಎಂದು ಉಸಿರೆಳೆಯಿತು ಅವಳ ಮನ.

ಅಷ್ಟರಲ್ಲಿಯೇ ರಿಂದಕ್ಕ ಹೊರಗೆ ಬಂದು ರಾಘುವಿಗೆ ಜಳಕ ಮಾಡಲು ಹೇಳಿದರು. ರಾಘು-ಲೀಲೆಯರ ಜಳಕವಾಗುವಷ್ಟರಲ್ಲಿ ಅಡಿಗೆಯೂ ಸಿದ್ಧವಾಗಿತ್ತು. ರಿಂದಕ್ಕ ಎಲೆ ಹಾಕಿದರು. ಹಾಗೆಯೆ ರಾಮು, ಲೀಲೆ, ರಾಘು ಮೂವರಿಗೂ ಊಟಕ್ಕೆ ಕುಳಿತು ಕೊಳ್ಳಲು ಹೇಳಿದರು. ರಾಘು, ರಾಮು ಊಟಕ್ಕೇನೊ ಕುಳಿತರು. ರಿಂದಕ್ಕ ಚಾಲುವರಿದರೂ ಲೀಲೆ ಊಟಕ್ಕೆ ಕುಳಿತು ಕೊಳ್ಳಲಿಲ್ಲ ಪತಿಯ ಜತೆಗೆ.

'ಗಂಡ್ಸರದಾಗಲಿೞ.'

ಎಂದು ರಾಗ ಎಳೆದಳು ಲೀಲೆ. ಅವಳ ಈ ಭಾವನೆ ಹಳ್ಳಿಯ ಗೊಡ್ಡು ಅಚಾರ ಎಂದು ಒಳಗೊಳಗೆ ನಕ್ಕಳು ಸೀತೆ. ರಾಘು ಸಹ ಅದೇ ಭಾವನೆಯಿಂದ ಆದರೂ ಗಟ್ಟಿಯಾಗಿ ನಗುತ್ತಲೆ ಹೇಳಿದ.

'ನಮ್ಮ ಕೂಡ ಊಟಕ್ಕೆ ಕೂಡೂದಂತ! ನಮ್ಮ ಎಂಜಲ ತಿನ್ನೋದು ಅಕೀ ಹಣೇಬರದಾಗದ.'

ಸೀತಳಿಗೆ ಹರುಷವನ್ನುಂಟು ಮಾಡಿತು ರಾಘುವಿನ ಆ ಮಾತು. ತನ್ನವರೂ ಹೀಗೆ ಹಳ್ಳಿಯ ಗೊಡ್ಡು ಆಚಾರಗಳನ್ನು ತಿರಸ್ಕಾರದಿಂದ ಕಾಣುತ್ತಿದ್ದರೆ ಈ ಕಷ್ಟ ತನಗೆ ಬರುತ್ತಲೇ ಇರಲಿಲ್ಲ. ಎಷ್ಟೊಂದು ಸುಖವಾಗಿರಬಹುದಿತ್ತು! ಎಂದು ಉಸಿರೆಳೆದಳು ಸೀತ ಮನದಲ್ಲಿಯೆ.

ಊಟ ಆರಂಭವಾಯಿತು. ರಾಮು ಸಾರು ಅನ್ನವನ್ನು ಕಲಿಸಿ ತುತ್ತೊಂದನ್ನು ಬಾಯಿಗಿಟ್ಟು ಕೊಳ್ಳುತ್ತ ಹೇಳಿದ.

'ಹೆಂಗಾಗೇದಪ ಅಡಿಗಿ. ಹೋಟಲಿನ ಊಟಕ್ಕ ಚಲೋ ಅನ್ನವ್ರು ನೀವು–ನಗರದ ಮಂದಿ !'

'ಇರಲಿ ಬಿಡೊ ರಾಮ್ಯಾ–ಈಗೆರಡು ದಿನಾಆತು ಹಳ್ಳ್ಯಾಗ ಬಂದ ಇರ ಲಿಕ್ಕೆ ಹತ್ತಿ.'

'ನಿಮ್ಮ ನಗರಕ್ಕ ಕಲೀಲಿಕ್ಕೆ ಬರೂದಕಿಂತ ಮೊದಲು ನಾ ಹಳ್ಳ್ಯಾಗ ಇರತಿದ್ದೆ.'

ಮತ್ತೆ ನಾಲ್ಕಾರು ನಿಮಿಷ ನೀರವ–ನಿಶ್ಯಬ್ದ.

ಶ್ರೀಖಂಡದಲ್ಲಿ ಪುರಿಯ ಒಂದು ತುಣುಕನ್ನು ಅದ್ದಿ ಬಾಯಿಗಿಟ್ಟು ಕೊಳ್ಳುತ್ತ ರಾಘು ಮತ್ತೆ ಮಾತಿಗೆ ಮೊದಲು ಮಾಡಿದ.

'ಅಡ್ಡೀಯಿಲ್ಲಪ, ಸೀತಕ್ಕ ಚಲೋ ಅಡಿಗಿ ಮಾಡತಾಳ. ಎಷ್ಟ ಜನ್ಮ ಕಳದರಾರ್ಊ ನಮ್ಮಾಕಿಗೆ ಹಿಂಗ ಅಡಿಗಿ ಮಾಡಲಿಕ್ಕೆ ಬಂದಿತು.'

ರಾಘುವಿನ ದೊಡ್ಡ ಸುಳ್ಳಿಗೆ ಲೀಲೆ ನಕ್ಕಳು. ಸೀತೆ ತನ್ನ ಪಾಕ ಪ್ರಶಂ ಸೆಯಿಂದ ಈ ಅಹಂಕಾರದ ನಗೆ ಬೀರಿದಳು. ಅದನ್ನು ಕಂಡು ರಾಮು ಕೆಣ ಕುವ ಸ್ವರದಲ್ಲಿ ಹೇಳಿದ.

'ನಮ್ಮ ಪುಣ್ಯಾ ನೋಡು ರಾಘು ನೀವೆಲ್ಲ ನಗರದವರು ಬಂದೀರಂತಕ್ಕ ಜನ್ಮದಾಗ ಒಮ್ಮೆರ ಅಡಿಗಿ ಮಾಡೂ ಸ್ಫೂರ್ತಿ ಬಂತು ನಮ್ಮ ಬಾಯಿಸಾಹೇ ಬರಿಗೆ.'

'ನೋಡಣ್ಣ ಹೆಂಗ ಹೇಳತಾರಕ್ಕ? ನಾ ಅಡಿಗಿ ಮಾಡದಿದ್ರ ಇವರು ಇಲ್ಲೆ ಉಳಿದಾರ ಉಳೀತಿದ್ರಕ ?'

ಸೀತಾ ತನಗಾದ ವಿಷಾದವನ್ನು ತೋರಗೊಡದಿದ್ದರೂ ಸಮರ್ಥನೆ ಗಾಗಿ ಎಂಬಂತೆ ರಾಘುವನ್ನು ಕೇಳಿದಳು. ರಾಮು ತನ್ನ ಹಾಸ್ಯದ ಮಾತು ಗಳನ್ನು ಮತ್ತೆ ಮುಂದುವರಿಸಿದ

'ಓಹೋ! ಬಾಯಿಸಾಹೇಬರ ಕೈ ಸವಟ ಹಿಡಿದ ಹಿಡಿದ ಸವದ ಹೋಗ್ಯಾವ.'

ರಿಂದಕ್ಕ ಇಷ್ಟು ಹೊತ್ತಿನವರೆಗೆ ಮೌನದಿಂದ ಅವರ ಸಂಭಾಷಣೆಯನ್ನಾಲಿಸುತ್ತಿದ್ದವರು ಈಗ ನಡುವೆಯೆ ಹೇಳಿದರು.

'ಸೀತಾ ಮನಸಗೊಟ್ಟ ಅಡಿಗಿ ಮಾಡಿದರ ಚಲೋ ಮಾಡತಾಳ. ಆದ್ರ ಲೀಲಾನೂ ಅಡಿಗಿ ಏನ ಕೆಟ್ಟ ಮಾಡೂದುಲ್ಲ.'

ಲೀಲಳನ್ನು ನೋಯಿಸಬಾರದೆಂದು ರಿಂದಕ್ಕ ಹಿರಿಯ ಮನಸ್ಸಿನಿಂದ ಹೇಳಿದ್ದರೇನೊ! ರಾಘು ಮಾತ್ರ ಅವರ ಮಾತನ್ನು ಒಪ್ಪಿಕೊಳ್ಳುವ ಸ್ಥಿತಿಯಿರಲಿಲ್ಲ. ಅದಕ್ಕಾಗಿಯೆ ಅವರನ್ನು ಕೇಳಿದ.

'ಅಲ್ರಿ, ಕಕ್ಕಿಃ ನೀವಿಷ್ಟ ಹೇಳತೀರಿ. ಲೀಲೆಗೆ ಚಲೋ ಅಡಿಗಿ ಮಾಡಲಿಕ್ಕೆ ಬರತದಂತ ಅಕಿ ಮುಖದಾಗೇನಾರ ಬರದ್ಧದೇನು ಮಾತ್ರಃ? ಒಂದೂವರೆ ವರಷಾತು ಅಕಿ ಗಂಡಾದ ತಪ್ಪಿಗೆ ಅಕಿ ಮಾಡಿದ ಅಡಿಗೀನ್ಹ ಊಟ ಮಾಡತೀನಿ.'

'ಈಗಿನ ಹುಡಗ್ರಿಗೆ ಹಿತ್ತಲಗಿಡ ಮದ್ದಲ್ಲೊ ರಾಗಣ್ಣಃ. ಹಿಂಗಂತಿಯಲ್ಲಃ ಬೇಕಾರ ಜಿದ್ದಕಟ್ಟು, ನೀನ್ಹ ಲೀಲಾನ ಅಡಿಗಿ ಪಸಂದಾಗೇದ ಅಂತ ಹೇಳಿದರ್ಹ ?'

'ಅದರ ಹಣೇಬರ ನನಗ ಗೊತ್ತಿಲ್ಲೇನ್ರಿ?'

ರಾಘು ತಿರಸ್ಕಾರದಿಂದ ಹೇಳಿದ. ರಿಂದಕ್ಕ ಶಾಂತಸ್ವರದಲ್ಲಿ ಉತ್ತರಿಸಿದರು.

'ನನಗ ಗೊತ್ತದ ಏಳೊ ರಾಗಣ್ಣಃ ನೀನ್ಹ ಲೀಲಾ ಪಸಂದಾಗಿ ಅಡಿಗಿ ಮಾಡ್ಯಾಳ ಅಂತ ಒಪಿಗೋತಿದಿ.'

'ಕೈಯಾಗ ಕನಡಿ ಇರತಿರಲಿಕ್ಕೆ ನೀರಿನ್ಯಾಗ ನೋಡೂದ್ಯಾಕಃ?'

'ಕೈಯಾಗ ಕನಡಿ ಅದ್ಹ ಅಂಬೂದ್ಹ ನಿನಗ ಖಾತ್ರಿ ಇಲ್ಲ. ಅಂದ ಮ್ಯಾಲೆ ನೀರಿನ್ಯಾಗಾರ ನೋಡಬಾರ್ದ್ಹ. ಬೆಳಗಾದ್ರ ಬಂತ ಅಕ್ಕನ ಆಟ ಅಂಗಳಕ್ಕಂತ ತಾನ್ಹ ಗೊತ್ತಾಗತದ.'

ಊಟ ಮುಗಿಯಿತು. ರಾಘು, ರಾಮು ಎದ್ದು ಕೈತೊಳೆದುಕೊಂಡು ಅಡ್ಡಾದರು. ಮಲಗಿದಲ್ಲಿಯೆ ತುದಿ ಮೊದಲಿಲ್ಲದೆ ಅವರ ಹರಟೆ ಸಾಗಿತ್ತು.

ಹೆಂಗಸರು ಊಟಕ್ಕೆ ಕುಳಿತರು. ಲೇಲೆ ತನ್ನ ಪತಿಯ ಎಂಜಲು ಎಲೆಯ ಮೇಲೆ ರಿಂದಕ್ಕನವರಿಗೆ ಬಡಿಸಲು ಹೇಳಿದುದನ್ನು ಕಂಡು ಸೀತೆ ಹೊಟ್ಟೆ ಹಿಡಿಸಲಾರದೆ ನಕ್ಕಳು.

'ಹೆಂಗ ಊಟ ಮಾಡತೀಯೊ, ಏನೊ ನಮ್ಮವ್ವ ನೀ. ಎಂಜಲ ಎಲ್ಯಾಗ ಊಟ ಮಾಡೂದೇನ ಅಸಹ್ಯ.'

'ಗಂಡನ ಎಂಜಲು ಅಷ್ಟು ಪವಿತ್ರ ಹೇಣ್ತಿಗೆ!'

ರಿಂದಕ್ಕ ನುಡಿದರು ತಮ್ಮ ಹಳೆಯ ನೆನವಿನಲ್ಲಿ.

'ಏನ್ರವ್ವ ಅಸಹ್ಯ. ಹಂಗ ಊಟ ಮಾಡ್ಯ ಗಂಡ ಪವಿತ್ರ ಅನ್ನೊದ್ನ ಪ್ರದರ್ಶನ ಮಾಡಬೇಕೇನ ಹೆಂಡತಿ ಆದಾಕಿ.'

'ನಿನ್ನ ಕೂಡ ಯಾರ ಹಾಕ್ಯಾಡಿ ಗೆದೀಬೇಕ ಸೀತ. ನಿನಗ ಚಲೊ ಕಂಡ್ಹಂಗ ನೀ ನಡಿ. ನಮಗ ಚಂದ ಕಂಡ್ಹಾಗ ನಾವ ನಡೀತೀವಿ. ಅವರ ವರ ಕಾಲ ಅವರ್ರಿಗೆ.'

ರಿಂದಕ್ಕ ಊಟ ಮುಗಿಸಿಬಿಟ್ಟರು. ಊಟ ಮೌನದಿಂದಲೆ ನಡೆಯಿತು. ಹೂರಗೆ ಅಡ್ಡಾದ ಗೆಳೆಯರ ಹರಟೆಯು ನಿಂತಹಾಗಿತ್ತು. ಆದರೂ ಅವರ ಎಚ್ಚತ್ತ ಮನಸ್ಸು ಅದೇನನ್ನೊ ನುಡಿಯುತ್ತಿತ್ತು.

'ಸೀತಾ ಒಳ್ಳೆಯ ಹುಡುಗಿ. ಇಂತಹ ಹುಡುಗಿಯ ಕೈ ಹಿಡಿದ ರಾಮು ಭಾಗ್ಯವಂತ. ಆದರೆ ಅವಳನ್ನು ಸರಿಯಾಗಿ ತಿಳಿದುಕೊಂಡಿಲ್ಲವಲ್ಲ ಅವನು!' ಎಂದು ರಾಘು ಯೋಚಿಸುತ್ತಿದ್ದ.

ಲೀಲಾಳನ್ನು ಎಷ್ಟೊಂದು ತಿರಸ್ಕಾರದಿಂದ ಕಾಣುತ್ತಾನೆ ರಾಘು' ಬೇಡಿ ಬಯಸಿದ್ದೆಲ್ಲ ಬಾಳಿನಲ್ಲಿ ದೊರೆಯುತ್ತಿದ್ದರೆ ದುಃಖ ವೆನ್ನುವದೆ ಮಾನವನ ಇತಿಹಾಸದಲ್ಲಿ ತಲೆ ಹಾಕುತ್ತಿದ್ದಿಲ್ಲ. ಬೇಡಿ ಬಯಸದಿದ್ದರೂ ತನ್ನ ಪಾಲಿಗೆ ಬಂದದ್ದನ್ನೆ ಪಂಚಾಮೃತವೆಂದು ತಿಳಿದರೆ ಎಷ್ಟು ಸುಖವಂತನಾಗಿರ ಬಹುದು. ದುಃಖವನ್ನೆ ಸುಖವನ್ನಾಗಿ ಮಾರ್ಪಡಿಸಬಹುದು.......' ಎಂದು ರಾಮು ಗೆಳೆಯನಿಗಾಗಿ ತಲೆಕೆದರಿಕೊಳ್ಳುತ್ತಲಿದ್ದ.

ಊಟಕ್ಕೆ ಕುಳಿತಿದ್ದರೂ ಅದನ್ನು ಮರೆತು ಸೀತೆಯ ಮನಸು ರಾಘು—ಲೀಲೆಯರನ್ನು ತೂಗಿ ನೋಡುತ್ತಿತ್ತು. –'ಎಂತಹನಿಗೆ ಎಂತಹ ಅಜ್ಞಾನಿ, ಅಶಿಕ್ಷಿತ ಹೆಂಡತಿ!' ಎಂದು ಉದ್ಗರಿಸುತ್ತಿತ್ತು.

'ಸೀತ ಒಳ್ಳೆಯ ಹೆಂಡತಿಯಾಗಿ ಬಾಳಲಿ. ಹಳ್ಳಿಗರ ವಿಚಾರದ ತಪ್ಪು ಕಲ್ಪನೆ ತೊಲಗಿ ಹೋಗಲಿ' ಎಂದು ಹಾರೈಸುತ್ತಿದ್ದಳು.

ರಿಂದಕ್ಕ ಅವರೆಲ್ಲರಿಗಿಂತಲೂ ಮುಂದುವರಿದು—ತಾವು ಉಟಕ್ಕೆ ಕುಳಿತಾಗ ಮಾಡಿದ ಪ್ರತಿಜ್ಞೆಯನ್ನು ನೆನೆದುಕೊಂಡು—'ಲೀಲೆ ಬಂಗಾರದಂಥ ಹುಡುಗಿ. ಪಿತ್ತಲ ಗಿಡ ಪುದ್ದಿಗೆ ಬಾರದ ಹಾಗೆ ಲೀಲೆಯ ಗತಿಯಾಗಿದೆ. ಅವಳು ಮಾಡಿದ ಅಡಿಗೆಯನ್ನುಣ್ಣಿಸಿ ರಾಘುವಿನಿಂದ ಹೊಗಳಿಸಿ ಅವನಿಗೆ ಟೊಪ್ಪಿಗೆ ಹಾಕುವದು ಹೇಗೆ ? ' ಎಂದು ಲೆಕ್ಕಹಾಕುತ್ತಿದ್ದರು.

ಅಂತು ಗಣಿತ ಶಾಸ್ತ್ರಜ್ಞನೊಬ್ಬ ತೀರ ಕಠಿಣ ಲೆಕ್ಕವನ್ನು ಮುಂದಿಟ್ಟುಕೊಂಡು ಬಿಡಿಸಿಲಾರದೆ ತೊಳಲುತ್ತಿರುವ ಹಾಗೆ ಅವರೆಲ್ಲರ ಸ್ಥಿತಿಯಾಗಿತ್ತು. ಈ ಜನ್ಮದಲ್ಲಿಯಾದರು ಬಿಡಿಸುತ್ತೇವೊ ಇಲ್ಲವೊ ಎಂಬ ಸಮಸ್ಯೆವೂ ಆಗಾಗ ಅವರಿಗೆ ಕವಿದು ಬರುತ್ತಿತ್ತು.

೩

ನಾಲ್ಕು ದಿನಗಳು ಕಳೆದು ಹೋದವು. ಗೆಳೆಯನ ಸಹವಾಸದಲ್ಲಿ ರಾಘುವಿಗೆ ತುಸು ಸಮಾಧಾನ ದೊರೆತಿತ್ತು. ಹಳ್ಳಿಯ ಜನರ ನೆಲದ ಸಹವಾಸದಲ್ಲಿ ರಿಂದಕ್ಕನವರ ಅಂತಃಕರುಣದಲ್ಲಿ ಲೀಲೆ ನೆಮ್ಮದಿಯ ಉಸಿರನ್ನು ನಿಧಾನವಾಗಿ ಆಡಿಸಲಾರಂಭಿಸಿದ್ದಳು. ಶಾಂತಿಯ ಕರೆ ಅತಿ ದೂರದಿಂದ ರಾಮುವಿನ ಮನೆಗೆ ಕೇಳಲೋ-ಬೇಡವೊ ಎನ್ನುವಷ್ಟು ಸಾವಕಾಶವಾಗಿ ಕೇಳಬರುತ್ತಿತ್ತು.

ಅಂದು ಸಂಜೆ ರಾಮು ಉತ್ಸಾಹದಿಂದ ಹೇಳಿದ ತನ್ನ ಗೆಳೆಯನಿಗೆ.

'ಇವತ್ತ ನಮ್ಮ ಹೊಲಕ್ಕ ಹೋಗೋಣ '

'ಎಲ್ಲೆಲ್ಲಿ ಅಡ್ಡ್ಯಾಡಸಬೇಕಂತಿ ಅಡ್ಡ್ಯಾಡಿಸಿಕೊಂಬಾ. ಆದರೆ ಒಂದು ಮಾತು, ಮೂರು ನಾಲ್ಕು ಮೈಲು ನಡಿ ಅಂದ್ರಮಾತ್ರ ನನಗs ಈ ಜನ್ಮದಾಗ ಸಾಧ್ಯ ಇಲ್ಲೇನಪ,'

'ಅದರ ಕಾಳಜಿ ಯಾಕೋs ನಿನಗs ? ಅರ್ಧ ಫರ್ಲಾಂಗನ್ಯಾಗs ವಾಕಿಂಗ್ ಅಂತ|ಹೋಗಿಬರೂ ಚಟ ಅಂತೂ ನಿಮಗ ಇರತsದಲ್ಲ. ಅಷ್ಟs ನಡದ್ರ ನಮ್ಮ ಹೊಲದ ಮುಂದಿನ ಹೊಲ ಬರತsದ.'

'ಇರಲಿ ಬಿಡೊ ಮಾರಾಯ. ಈ ಗಂತು ಹೋಗೋಣ ನಡಿ. ನ ನಗೂ ಕೂತ ಬ್ಯಾಸರಕಿ ಬಂದsದ.'

ಸರಿ. ರಿಂದಕ್ಕ ನವರನ್ನುಳಿದು ಎಲ್ಲರೂ ಹೊಲಕ್ಕೆ ಹೊರಟರು. ಅದರಲ್ಲಿ ಹೆಚ್ಚಿನ ವಿಷಯವೆಂದರೆ ಎಂದೂ ಮನೆಬಿಟ್ಟು ಹೊರಬೀಳದ ಸೀತ ಎಲ್ಲರ ಜತೆಗೂ ಹೊಲಕ್ಕೆ ಹೊರಟದುದು. ಅವರೆಲ್ಲರ ಮುಂದೆ ಭರಮನ ಮಗ ರಂಗ ನಡೆದಿದ್ದ. ಮಾಟಾದ ಹುಡಿ ತುಂಬಿದ ಆ ಬೀದಿಗಳು, ಗುರುತಿಸಲಾರದ ಆ ಮನೆಗಳು, ಹೊಲಸು-ಹರಿದ ಅಂಗಿಯೊಂದನ್ನು ತೊಟ್ಟುಕೊಂಡು ಮಣ್ಣಾಟ ವಾಡುತ್ತ ನಿಂತಿ ಕಪ್ಪಗಿನ ಆ ಹುಡುಗರ ತಂಡ, ಅವರ ಹಿರಿಯರು-ಎಲ್ಲರನ್ನು, ಎಲ್ಲವನ್ನು ನೋಡುತ್ತಿರುವಂತೆ ರಾಘು 'ಇದು ನಿಜವಾಗಿಯು ಗೊಂಡಾರಣ್ಯ' ಎಂದು ತನ್ನಲ್ಲಿಯೆ ಉದ್ಗಾರ ತೆಗೆದ ಅಷ್ಟರಲ್ಲಿಯೆ ಅವನ ದೃಷ್ಟಿ ಬೀಳಲಾಗಿದ್ದ ಮನೆಯ ಕಟ್ಟೆಯಲ್ಲಿ ಕುಳಿತು ತಂಬಾಕು ಹಾಕಿಕೊಳ್ಳುತ್ತಿರುವ ಮಧ್ಯಮ ವಯಸ್ಸಿನ ಈರ್ವರು ಒಕ್ಕಲಿಗ ಹೆಣ್ಣು ಮಕ್ಕಳ ಮೇಲೆ ಹರಿಯಿತು. ಇವರನ್ನೆಲ್ಲ ನೋಡಿದೊಡನೆ ಆ ಸ್ತ್ರೀಯರು ಮೈತುಂಬ ಸೆರಗನ್ನು ಸರಿಯಾಗಿ ಹೊದೆದುಕೊಂಡು 'ಅಯ್ಯ ಜಾಗೀರ್ದಾರ ಮನೀ ಅವ್ರು!....' ಎಂದು ಮನೆಯೊಳಗೆ ಓಡಿ ಹೋದರು.

'ಹೀಗೇಕೆ ಅವರು ಓಡಿ ಹೋದರು? ಗಂಡಸರನ್ನು ಕಂಡರೆ ಅವರಿಗೆ ಅಷ್ಟು ಹೆದರಿಕೆಯೆ? ಇಲ್ಲವೆ ಗಂಡಸರೆಂದರೆ ನುಂಗುವ ಮೃಗಗಳೆಂದು ಭಾವಿಸಿದ್ದಾರೆಯೆ? ಇದು ಅವರ ಅಜ್ಞಾನ ಎಂದು ರಾಘು—ಸೀತೆಯರ ಮನಸ್ಸುಗಳು ಹೇಳಿದವು. ರಾಘುವಂತೂ ಆಗ ಲೀಲೆಯ ನೆನಪಾಗಿ ಹಿಂದೆ ತಿರುಗಿದ. ಲೀಲೆಯ ಮೊಗದಲ್ಲಿ ತುಂಟ ನಗೆ ಉಕ್ಕುತ್ತಿತ್ತು.

ಹೊಲ ತಲುಪಿದರು. ರಂಗ ಅವರನ್ನು ಬದುವಿನಗುಂಟ ಕರೆದುಕೊಂಡು ನಡೆದಿದ್ದ. ಅವನನ್ನು ಅವರೆಲ್ಲ ಹಿಂಬಾಲಿಸಿದ್ದರು.

ಬಿಳಿಜೋಳದ ತೆನೆ ಹೊಡೆ ಹಾಯ್ದು ಉಲ್ಹಾಸದಿಂದ ಕುಲು ಕುಲು ನಗುತ್ತಿತ್ತು ತನ್ನ ಕತ್ತನ್ನು ಹಿಸುಕುತ್ತಾರೆ. ಇನ್ನೊಂದೆರಡು ದಿನಗಳಲ್ಲಿ ಎಂಬುದನ್ನೂ ಮರೆತು ಸಂಜೆಯ ಹೂಬಿಸಿಲಲ್ಲಿ ಗಾಳಿ ಬೀಸುತ್ತಿರುವ ಹಾಗೆ ಸಂತೋಷದಿಂದ ತಲೆ ಅಲುಗಾಡಿಸುತ್ತಿತ್ತು. ಸಮೀಪದಲ್ಲಿ ನಿಂತು ನಿರುಕಿಸಿದರೆ ಒಂದೊಂದು ದಂಟೂ ಹಿರಿ-ಕಿರಿದಾಗಿತ್ತು. ತೆನೆ ಒಂದೊಂದರಲ್ಲಿ ಹೊಡೆ ಹಾಯಿಸಿಯೂ ಇರಲಿಲ್ಲ. ಆದರೂ ಅದರ ಅಪರಿಪೂರ್ಣತೆ ದೂರದ ನೋಟಕ್ಕೆ ಅಗೋಚರವಾಗಿತ್ತು.

‘ ಈ ಬೆಳೆಯಲ್ಲಿ ವ್ಯತ್ಯಾಸವಿದ್ದರೂ ಒಂದುತನದಲ್ಲಿ ವ್ಯತ್ಯಾಸವಿಲ್ಲವಲ್ಲ. ಹೀಗೆಯೆ ನೋಡುವ ಕಣ್ಣಿಗೆ ನಮ್ಮ ಸಂಸಾರ ಭಿನ್ನವಾಗಿ ಕಾಣಬಾರದಲ್ಲವೆ?’

ರಾಮು ಆ ಬೆಳೆ ನೋಡುತ್ತಿರುವಂತೆ ತನ್ನ ವಿಚಾರ ಕುದುರೆಯ ಕಡಿವಾಣವನ್ನು ಸಡಲಿಸಿದ್ದ. ಆ ಕುದುರೆಯ ಓಟವನ್ನು ನೋಡುವದ--ರಲ್ಲಿಯೆ ಸಮರಸನಾಗಿದ್ದ. ಅಷ್ಟರಲ್ಲಿಯೆ ‘ ಯಪ್ಪs ಪಾದಕ ಬಿದ್ನೆ. ಬಂದ್ರಾ್ರ ನನ್ನ ಹಡದಪ್ಪs.... ’ ಎಂಬ ಸ್ವರ ಅವನನ್ನೆಚ್ಚರಿಸಿತು. ರಾಮುವಿನಂತೆಯೆ ಎಲ್ಲರ ಕತ್ತುಗಳೂ ಆ ಆತ್ಮೀಯ ಭಾವಕ್ಕೆ ಅತ್ತ ತಿರುಗಿದವು.

ಬದುವಿನ ಹತ್ತರದ ಎಳೆಗರಿಕೆಯನ್ನು ಮೇಯಿಸುತ್ತ ಭರಮನ ವಯೋವೃದ್ಧ ತಾಯಿ ಚನ್ನವ್ವ- ಕಣ್ಣುಗಳು ಮಸಕಾಗಿದ್ದರೂ, ಶರೀರ ನಡುಗುತ್ತಿದ್ದರೂ ದುಡಿಯುವದು ತನ್ನ ಪಾಲಿನ ಧರ್ಮ ಎಂದು ಬಗೆದ ಚನ್ನವ್ವ ಅವರನ್ನು ಕಂಡೊಡನೆಯೆ ಹೃತ್ಪೂರ್ವಕ ಸ್ವಾಗತ ಬಯಸಿದ್ದಳು. ರಾಮು ಮುಂದಾಗಿ ಹೇಳಿದ.

‘ ಶರಣ ಬೇ ಚನ್ನವ್ವ ಭರಮಣ್ಣೆಲ್ಲೆ ಕಾಣವಲ್ನಲ್ಲs ? ’

‘ ಬರ್‍ರಿಯಪ್ಪs ಅಲ್ಲೇ ಅದಾನ ಮಾನ ಮರದ ಬುಡುಕ ’

ಎಂದು ಎತ್ತುಗಳ ಬೆನ್ನಮೇಲೆ ಕೈಎಳೆದು ಪ್ರೀತಿಯಿಂದ ‘ ಇಲ್ಲೆ ಇರ್‍ರಿ. ಈಗ ಬರತೇನು....’ ಎಂದು ಹೇಳಿ ಅವರಿಗಿಂತಲೂ ಮುಂದೆ ನಡೆದಳು. ಅವಳನ್ನು ಅವಳ ಮಾತುಗಳನ್ನು ಕಂಡು ರಾಘು ಸೀತೆ ಮನದಲ್ಲಿಯೆ ನಕ್ಕರು.– ‘ ಹುಚ್ಚಿ ! ದನಗಳ ಕೂಡ ಮಾತನಾಡುವದೆ?.... ಏನಾದರೂ ಅಡ್ಡಿಯಿಲ್ಲ. ಮುದುಕರಿಗಾದರೂ ಈ ಹಳ್ಳಿಯಲ್ಲಿ ಸ್ವಾತಂತ್ರ್ಯವಿದ್ದಂತೆ ಕಾಣತ್ತದೆ.! ’ ಎಂದುಕೊಂಡರು.

ಅಷ್ಟರಲ್ಲಿಯೆ ಮಾವಿನ ಮರ ಬಂದಿತು. ಅತ್ತ ಭರಮ ಬೆಳಸಿ ಸುಡುವದರಲ್ಲಿ ನಿರತನಾದವನು ಎಲ್ಲರಿಗೂ ಕೈಮುಗಿದ. ಪ್ರತಿಯಾಗಿ ರಾಮು ಅವನಿಗೆ ನಮಸ್ಕರಿಸಿದ. ಅಲ್ಲಿಯೇ ಇದ್ದ ಚನ್ನವ್ವ ಹೇಳಿದಳು ರಂಗನಿಗೆ.

‘ ರಂಗ್ಯಾs ಗಡs ಅsಟ ಗೊಂಗಡಿ ತತಾಯಪ್ಪs ’

ರಂಗ ‘ ಗೊಂಗಡಿ ’ ತಂದು ಅಲ್ಲಿಯೆ ಹಾಸಿದ. ಎಲ್ಲರೂ ಕುಳಿತುಕೊಂಡರು. ಚನ್ನವ್ವ ತಾನೂ ಕುಳಿತುಕೊಂಡು ಹೇಳಿದಳು.

'ಯಾಡೂ ಜೋಡಿ ನೋಡಿ ಸಂತೋಸ ಆತೆಪ್ಪs. ಮಾದೇವ ಬ್ಯಾsಳsಟ ಆವಿಸ್ಯ ಹಾಕಿ ಜಗ್ಗsಟ ಮಕ್ಳನ ಕೊಡ್ಲಿ.'

ಮುದುಕಿ ಹೃದಯ ಹಿಡಿಸಲಾರದೆ ಸಂತೋಷದಿಂದ ಆಶೀರ್ವದಿಸಿದ್ದರೂ ಆ ಧ್ವನಿಯನ್ನು ಗುರುತಿಸಲಾರದೆ ರಾಘು–ಸೀತೆ ಗಟ್ಟಿಯಾಗಿಯೆ ತಿರಸ್ಕಾರ ಮಿಶ್ರಿತ ಧ್ವನಿಯಲ್ಲಿ ನಕ್ಕರು. ಜತೆಗೆ 'ಹೇಗಾದರು ಬದುಕುವದು.... ಮಕ್ಕಳನ್ನು ಹೆರುವದು.... ಇದೇ ಇವರ ಬದುಕಿನ ಉದ್ದೇಶವೆ?....' ಎಂಬ ತೊಡಕೂ ಅವರ ತಲೆಯಲ್ಲಿ ಮಿಂಚದಿರಲಿಲ್ಲ.

ಬೆಳಸು ತಿಂದು, ಹರಟೆ ಹೊಡೆದು ಕತ್ತಲಾದ ಮೇಲೆ ಅವರು ಮನೆಗೆ ನಡೆದರು. ಅವರನ್ನು ಬೀಳ್ಕೊಳ್ಳಲು ಹೊಲದಾಟ ಓಣಿ ಕೂಡುವವರೆಗೂ ಚನ್ನವ್ವ, ಭರಮ ಬಂದಿದ್ದರು. ಅನಂತರ ಅವರು ಮತ್ತೊಮ್ಮೆ ಶರಣು ಹೊಡೆದು ಹೊಲದಲ್ಲಿ ನಡೆದರು. ರಂಗ ಅವರನ್ನೆಲ್ಲ ನಿಧಾನವಾಗಿ ಕರೆದುಕೊಂಡು ನಡೆದಿದ್ದ. ಆ ಓಣಿಯ ಪಕ್ಕದಲ್ಲಿಯ ಒಂದು ಹೊಲದಲ್ಲಿ ರಾಶಿ ನಡೆದಿತ್ತು. ಹಂತಿ ಕಟ್ಟಿ, ತುಂಬ ಉರಿ ಹಚ್ಚಿ ಆನಂದದಿಂದ ಅವರು ಹಾಡಿಕೊಳ್ಳುತ್ತಿದ್ದರು. ಎತ್ತುಗಳಿಂದ ಕಾಳು ತುಳಿಸುತ್ತಿರುವ ಆ ಹೊಲದ ಒಕ್ಕಲಿಗ ಹಾಡುತ್ತಲಿದ್ದ ಗಟ್ಟಿಯಾದ ಸ್ವರದಲ್ಲಿ!

'ಅಕ್ಕಲ ಗೋದಿಯ ರೊಟ್ಟಿ
ಸಕ್ಕರೆಯ ಬಾಳೆಯ ಹಣ್ಣು–
ಚಿಕ್ಕ ಯಮನೂರ ಕೆರಿಯಾಗs–
ಚಿಕ್ಕ ಯಮನೂರ–ಕೆರಿಯಾಗುಣಿಸಿದ ಬಾಲೆ
ನಿನ ಮರೆಯಂದರ್ಹೆಂಗs ಮರೆಯಲೇ'

ತೀಡುತ್ತಿರುವ ಸಂಜೆಯ ಮೆಲುಗಾಳಿಯಲ್ಲಿ ತೇಲಿಕೊಂಡು ಅವರಿಗೆ ಸ್ಪಷ್ಟವಾಗಿ ಆ ಜಾನಪದ ಗೀತ ಕೇಳಿಸಿತು. ಅಂತಹ ಎಷ್ಟೋ ಜಾನಪದ ಹಾಡುಗಳನ್ನು ಕೇಳಿದ ರಾಮುವಿಗೆ ಲೀಲೆಗೆ ಅಷ್ಟೊಂದು ಗಮನವಿರದಿದ್ದರೂ ರಾಮು–ಸೀತೆಯರ ಚಿತ್ತಗಳನ್ನು ಆ ಗೀತೆ ಅಪಹರಿಸಿತ್ತು. 'ಚುಟುಕಾಗಿ ಇದ್ದರೂ ಎಷ್ಟು ಭಾವ ಪೂರ್ಣವಾಗಿದೆ. ಪ್ರಣಯ, ವಿರಹ ಹಳ್ಳಿಯವರಿಗೆ ಗೊತ್ತಿರದಿದ್ದರೂ ಅಲ್ಲಿಯ ಇಂತಹ ಕವಿಗಳಿಗಾದರೂ ಗೊತ್ತಿದೆಯಲ್ಲ!' ಎಂದು ಅವರ ಹೃದಯಗಳು ಉದ್ಗರಿಸುತ್ತಿದ್ದವು.

ಹಾಗೆ ಮೆಲುಕು ಹಾಕುತ್ತ ನಡೆದಾಗಲೆ ರಾಮುವಿನ ಮನೆ ಬಂದಿತು. ಗೆಳೆಯರು ಪಡಶಾಲೆಯಲ್ಲುಳಿದರೂ ಅಡಿಗೆ ಮಾಡುತ್ತ ಕುಳಿತ ರಿಂದಕ್ಕನವರ ಬಳಿಗೆ ಲೀಲ–ಸೀತೆ ನಡೆದರು. ಮಣೆ ಹಾಕಿಕೊಂಡು ಕುಳಿತ ಮೇಲೆ ಸುಮ್ಮನೆ ಕುಳಿತಕೊಳ್ಳಲಾರದೆ ಲೀಲಾ ಕೇಳಿದಳು.

' ಸೀತಾ, ನಿನಗ ಈ ಹಳ್ಳಿ ಮನಸಿಗೆ ಬಂತಃ? '

' ನಿನಗ ಪಟ್ಟಣ ಮನಸಿಗೆ ಬಂದsದೇನು? '

' ಹೆಣ್ಣು ಜನ್ಮಕ ಬಂದ ಮ್ಯಾಲೆ ಅನ್ನೆಲ್ಲ ಹೆಂಗ ವಿಚಾರ ಮಾಡೂದs ಸೀತಾ ?- ನಿಮ್ಮ ಗಂಡಂದಿರೆಲ್ಲಿರತಾರ ಅಲ್ಲೇ ಇರೂದು ನೀವೂ. ಅವರಿಗೆಲ್ಲೆ ಸುಖ–ಸಂತೋಷ ಅನಸ್ತದ ಅಲ್ಲೇ ನೀವೂ ದೊರಕಿಸಲಿಕ್ಕೆ ಪ್ರಯತ್ನ ಮಾಡಬೇಕು.'

ರಿಂದಕ್ಕ ಹುಳಿಗೆ ಒಗ್ಗರಣೆ ಹಾಕುತ್ತ ಹೇಳಿದರು. ಕುಳಿತಲ್ಲಿಂದಲೇ ಆದರೆ ಅದೆಂತಹ ಗೊಡ್ಡು ಭಾವನೆ ಎಂದು ಮನದಲ್ಲಿಯೆ ನಕ್ಕಳು ಸೀತೆ. ಹಾಗೆಯೆ ತನ್ನ ಮನದಲ್ಲಿದ್ದ ಸಂಶಯವನ್ನು ಹೊರಗೆ ಹಾಕಿದಳು.

'ಅಂದ್ರ, ನಮಗೇನ ಸುಖ–ಸಂತೋಷ ಇಲ್ಲs ಅಂತೀರ್‍ಯ ಅತ್ತೀವ್ರ?'

' ಮಕ್ಳ ಅಳತಾವ- ಅದಕಂತ ತನಗ ದುಃಖ ಆಗತದಂತ ಯಾವ ತಾಯಾರ ಸಂತೋಷ ದೊರಕಸಲಿಕ್ಕೆ ಮಕ್ಳನ ಬಿಟ್ಟ ಹೋಗ್ಯಾಳೇನ ಹೇಳು. ಮಕ್ಳು ಅತ್ರೂ, ನಕ್ರೂ, ತ್ರಾಸಕೊಟ್ರೂ ಆ ತಾಯಿಗೆ ಸಂತೋಷಾನs, ಪ್ರೀತೀನs! ಹಾಂಗs ಗಂಡಂದ್ರ, ತಾಯಿ ಮಾಡೂ ತ್ಯಾಗನs ಹೇಣ್ತೀನೂ ಮಾಡಬೇಕುಅಲ್ಲs ಅದು ಅಕಿ ಧರ್ಮ' ' ಧರ್ಮೊ--ಕರ್ಮೊ ಅಂತೂ ನನಗ ಈ ಹಳ್ಯಾಗ ಇರೂದ ಮನಸಿಗೆ ಬಂದಿಲ್ಲ. ಸುಮ್ನ ನಗರಕ್ಕ ಹೋಗೋಣಂದ್ರ ಅವರು ಕೇಳೂದುಲ್ಲ.'

ಸೀತಾ ಅತ್ತೆಯ ಮಾತಿನೆಡೆಗೆ ಲಕ್ಷ್ಯವಿಲ್ಲದೆ ಲೀಲಳಿಗೆ ಹೇಳಿದಳು. ತನ್ನ ಹೃದಯದಲ್ಲಿ ಮೂಡಿದ ಸ್ಪಷ್ಟ ಕಲ್ಪನೆಯನ್ನು ಅವಳೆದುರು ಇಟ್ಟಳು.

' ಪ್ಯಾಟೀನು, ಹಳ್ಳೇನು?– ಕಾಶಿಗೆ ಹೋಗಿ ಬಂದ್ರs ಸ್ವರ್ಗ ಸಿಗತದಂದ್ಹಾಗ ನಿನ್ನ ಈ ಮಾತು ಸೀತಾ. ಇದ್ದಲ್ಲೇನs ಸ್ವರ್ಗ ಅಂತ ತಿಳಿಯೂದು ಚಲೋ ಅಲ್ಲs? '

'ಸ್ವರ್ಗ ಅಲ್ಲದ್ದ ಸ್ವರ್ಗ ಅಂತ ತಿಳಿಯೂದು ನನ್ನ ಕಡಿಂದ ಆಗೂದುಲ್ಲ ನಮ್ಮವ್ವs.'

ಸೀತೆ ನಿಟ್ಟುಸಿರು ಬಿಟ್ಟು ನಿಧಾನವಾಗಿ ಹೇಳಿದಳು. ಮರಳುತ್ತಲಿರುವ ಹುಳಿಯನ್ನೇ ನೋಡುತ್ತ ಕುಳಿತ ರಿಂದಕ್ಕ ತಲೆಎತ್ತಿ ಸೊಸೆಯನ್ನು ನೋಡಿದರು. ನಿರಾಸೆಯ ತಾಂಡವ ನೃತ್ಯ ಸೀತೆಯ ಮೊಗದಲ್ಲಿ ನಡೆದಿತ್ತು. ಅನುಭವಿಕರಾದ ಅವರಿಗೆ ಅದನ್ನು ತಿಳಿದುಕೊಳ್ಳುವದು ಅಸಾಧ್ಯವಾಗಿ ತೋರಲಿಲ್ಲ ಅವರು ಶಾಂತರಾಗಿ ಕರುಣೆ ಬೆರತ ಸ್ವರದಲ್ಲಿ ಹೇಳಿದರು.

'ಇಷ್ಟ ಉದಾಸೀನ ಆಗಬ್ಯಾಡ ಸೀತಾ. ಕಂಡದ್ದ ಬೇಡೂ ಹುಡುಗರ್ಹಂಗ ಅನಸತದ ನಿನ್ನ ಮಾತು. ಇದ್ದಲ್ಲೇನs ಇದ್ದದ್ರಾಗs ಸುಖ ಹೆಚ್ಚಿಗೊಂಡ ಹೋಗೂದ ಶಾಣ್ಯಾತನ ಅಲ್ಲs ?'

ರಿಂದಕ್ಕನವರ ಧ್ವನಿಗೆ ಸ್ವರಗೂಡಿಸುತ್ತ ಲೀಲೆ ಕೇಳಿದಳು.

'ಅವರ ನಿನ್ನ ದಾರಿವಳಗ ಬರಲಿಲ್ಲ ಅಂದ್ರ, ನೀಯಾಕ ಅವರ ದಾರೀವಳಗ ನಡೀಬಾರ್ದ?– ಅವರ ದಾರೀವಳಗ ನಡಿಯೂದ್ಽ ಹೆಣ್ಣು ಜನ್ಮದ ಧರ್ಮ ಅಲ್ಲs ?'

'ನನಗಂತೂ ನಡೀಲಿಕ್ಕೆ ಆಗೂದುಲ್ಲ. ನೀ ನಡೀತೀ ಏನ ಲೀಲಾ?'

ಸೀತಾ ರಾಘುವಿನ ಕಾಗದ ಜ್ಞಾಪಿಸಿಕೊಂಡು ಲೀಲಳ ಪ್ರಶ್ನೆಗೆ ಸರಿಯಾದ ಉತ್ತರ ಕೊಡಲಾರದೆ ಕೇಳಿದಳು. ಲೀಲ ಆ ಪ್ರಶ್ನೆಯಿಂದ ಮೂಕಿಯಾದಳು. ಸೀತಳೂ ಹೆಚ್ಚಿಗೆ ಮಾತು ಬೆಳೆಯಿಸಲು ಇಷ್ಟಪಡಲಿಲ್ಲವೇನೊ ಮೌನವಾಂತಳು. ರಿಂದಕ್ಕ ಮಾತ್ರ ಶಾಂತಚಿತ್ತರಾಗಿಯೆ ಹೇಳಿದರು.

'ಇದ್ದದ್ದ, ಇಲ್ಲದ್ದ ಎಲ್ಲಾ ಹಚಿಗೊಂಡ ಹೋಗೂದs ಚಲೋಅಲ್ಲ. ಸಂಸಾರದಾಗ ಒಬ್ಬರಿಗೊಬ್ಬರ ಅಂತಃಕರಣ ಹಚಿಗೋತಿದ್ರs ಸಂಸಾರs– ಚೆಂತಿಲ್ಲ. ಬಡದಾಡೂ ಸಂಸಾರ, ಅಂತಃಕರಣ ಇಲ್ದ ಸಂಸಾರ ಏನಿದ್ರೇನು? ಎಲ್ಲಾರೂ ಒಂದಾಗಿ ಹೋಗೂದ್ಽ ಶಾಣ್ಯಾತನ. ನೋಡವ್ರ ಕಣ್ಣಿಗೂ ಚಂದ. ಮಾಡಾವ್ರ ಸಂಸಾರೂ ಚಂದ....'

ಪ್ರತಿಯಾಗಿ ಯಾರೂ ಬಾಯಿಬಿಡಲಿಲ್ಲ. ಅಡಿಗೆಯಾಗುವವರೆಗೂ ಗಂಭೀರವಾದ ವಾತಾವರಣ ಅಲ್ಲಿ ನೆಲೆನಿಂತಿತ್ತು. ಲೀಲೆ-ಸೀತೆಯರ ಮನಸ್ಸಿನ ಒಳತೋಟಿಯಲ್ಲಿ ವಿಚಾರದ ತುಮುಲ ವಿಪ್ಲವ ನಡೆದಹಾಗಿತ್ತು. ಅಷ್ಟರಲ್ಲಿಯೆ ರಿಂದಕ್ಕ ಎಲೆ ಹಾಕಲು ಹೇಳಿದರು.

ರಿಂದಕ್ಕ ಸೀತೆಯು ಒಲವನ್ನರಿತ ರಿಂದಕ್ಕ ಎಲ್ಲರನ್ನೂ ಕುಳ್ಳಿರಿಸಿ ತಾವೆ ಬಡಿಸಿದರು. ರಾಘು ಲೀಲೆಯೆಡೆಗೆ ತಿರುಗಿ ಅನ್ನದ ತುತ್ತೊಂದನ್ನು ಬಾಯಿಗಿಟ್ಟುಕೊಳ್ಳುತ್ತ ಹೇಳಿದ.

'ಅಂತೂ, ನಮ್ಮನೀ ಅದ್ರ ಪ್ರತಿಜ್ಞ ನೀವ ಮುರಿಸಿದಿರಿ ಕಕ್ಕಿ.'

ರಿಂದಕ್ಕ ರಾಘುವಿನ ಹೃದಯವನ್ನು ಗುರುತಿಸಿದ ಹಾಗೆ ಹೇಳಿದರು.

'ನಿಮ್ಮವರು ಅನ್ನೂ ಅಭಿಮಾನ ಇದ್ದವ್ಮ್ಯಾಲೆ ಪ್ರತಿಜ್ಞಾ ಯಾತರದೊ ರಾಗಣ್ಣ.

'ಪುಣ್ಯಾಕ್ಕ ಅಷ್ಟರ ಅಭಿಮಾನ ಅದ್ತ ಅಂತ ಶಾರದ್ದುಡಗಿನ್ನ ಬಿಟ್ಟು ನನ್ನ ಮದವಿ ಮಾಡಿಕೊಂಡ್ರು'

ಲೀಲೆ ಪತಿಯೆಡಗೆ ತಿರುಗಿ ಸ್ವಾಭಾವಿಕವಾದ ಮುಗ್ಧ ನಗೆಯನ್ನು ಮೊಗದಲ್ಲಿ ಅರಳಿಸುತ್ತ ಕೊಂಕು ನುಡಿಯಾಡಿದಳು.

'ಲೀಲೀ ಎಷ್ಟ ಜನ್ಮದ ತಪಸ್ಸ ಮಾಡಿದ್ನೊ ಏನೊ ಅದಕ್ತ ನೀ ನನ್ನ ಕೈ ಹಿಡದಿ. ಅಂದ ಮ್ಯಾಲೆ ಅಭಿಮಾನ ಇರದ ಇದ್ದೀತ್ತ?'

'ಹೌದ ನೋಡ ರಾಗಣ್ಣಾ. ನೀ ಅಷ್ಟ ತಪಸ್ಸ ಮಾಡಿರದಿದ್ರ ಇಂತಾ ಮುತ್ತಿನಂತ ಹುಡಗಿ ಸಿಗತಿದ್ಲೇನೊ?'

'ಎಂತಾ ಮುತ್ತಿನಂತ ಹುಡಿಗ್ರೀ! ಏಳೇಳ ಜನ್ಮಕ್ಕೇನ ಸಿಗತಿದ್ದಿಲ್ಲ ನೋಡ್ರಿ ಕಕ್ಕಿ!'

ಸೀತೆಗೆ ರಾಘುವಿನ ಈ ವಿಡಂಬನೆ ಸರಿದೋರಿತು. ಅವಳು ಭೇದಿಸುವ ದೃಷ್ಟಿಯಿಂದ ಲೀಲೆಯೆಡೆಗೆ ತಿರುಗಿ ನೋಡಿದಳು. ಲೀಲೆ ಪತಿಯ ಮಾತಿಗೆ ನೊಂದುಕೊಂಡಿರಲಿಲ್ಲ. ಅವಳ ಮೊಗದಲ್ಲಿ ಯಾವ ವಿಧವಾದ ನೋವೂ ತಲೆಹಾಕಿರಲಿಲ್ಲ. ಇನ್ನೂ ಎಳೆಯ ಮಗುವಿನ ಹಾಗೆ ನಗುತ್ತಲಿದ್ದಳು. ಸೀತೆಗೆ ಆ ನಗೆ ಕಂಡು ಒಂದು ಕ್ಷಣ ಮತ್ಸರವೆನ್ನಿಸಿರಬೇಕು. ಆದರೆ ಮರುಕ್ಷಣದಲ್ಲಿಯೆ ಸಮಾಧಾನ-ಹಳ್ಳಿಯ ಹುಡುಗಿಗೆ ಗಂಡನ ಆ ಚುಚ್ಚು ಮಾತು ಹೇಗೆ ಅರ್ಥವಾದೀತು ಎಂದು.

ಊಟ ಮುಗಿಯಿತು ಮಲಗುವದಕ್ಕಾಗಿ ರಾಘು–ಲೀಲೆಯರಿಗೆ ತನ್ನ ಕೊಟಡಿಯನ್ನು ಬಿಟ್ಟು ಕೊಟ್ಟದ್ದ ರಾಘು. ಲೀಲೆ ತನ್ನ ಪತಿಯ ಬಳಿಗೆ ಹೊರಟು ಹೋದ ಹಾಗೆಯೆ ಸೀತೆ ತನ್ನ ಪತಿ ಮಲಗಿದ ಇನ್ನೊಂದು ಕೊಟ

ಡಿಗೆ ತೆರಳಿದಳು. ರಾಮುವೇನೋ ಸ್ವಲ್ಪ ಹರಟೆ ಹೊಡೆದು ಮಲಗಿದ. ಸೀತೆಗೆ ಎಷ್ಟು ಪ್ರಯತ್ನಿಸಿದರೂ ನಿದ್ರೆ ಬರಲಿಲ್ಲ. ಬಲವಂತದ ಮುಂಘೆ ಸ್ನಾನ ಮಾಡಿದ ಹಾಗೆ ಅವಳ ಪರಿಸ್ಥಿತಿಯಾಗಿತ್ತು. ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ಅವಳೆಷ್ಟೋ ನಿದ್ರೆ ಹೋಗಲು ಪ್ರಯತ್ನಪಟ್ಟಳು. ನಿದ್ರೆ ಬಂದರಲ್ಲವೆ ಅವಳು ಮಲಗುವದು? ಅತ್ತಿತ್ತ ಹೊರಳಾಡುತ್ತಿದ್ದಳೆ ವಿನಹ ನಿದ್ರೆ ಸುಳಿಯಲಿಲ್ಲ. ಅಷ್ಟರಲ್ಲಿ ಅಡಿಗೆ ಮನೆಯಲ್ಲಿ ಹಲ್ಲಿ ಲೊಚಗುಟ್ಟಿತು. ಇನ್ನೂ ಕೆಲಸದಲ್ಲಿ ತೊಡಗಿದ ರಿಂದಕ್ಕ 'ಕೃಷ್ಣ, ಕೃಷ್ಣ' ಎಂದರು.

'ಅಯ್ಯೋ ಪಾಪ! ಎಷ್ಟು ದುಡಿಯುತ್ತಿದೆಯಲ್ಲ ಈ ಮುದುಕಿ ಸುಖ ಎಂತಹದೊ, ಸಮಾಧಾನವೆಂತಹವೊ!....ಆದರೂ ಉತ್ಸಾಹಕ್ಕೆ ಬರಲಿಲ್ಲ....'

ಮರುಕದಿಂದ ಉದ್ಗರಿಸಿತು ಸೀತಳ ಹೃದಯ. ಆದರೆ ಅದೊಂದೇ ಕ್ಷಣದಲ್ಲಿ ಅವಳ ಆ ಭಾವನೆ ಮಾಯವಾಯಿತು.

'ಸುಖ–ಸಂತೋಷದ ಕಲ್ಪನೆಯೆ ಇಲ್ಲ ಇವಳಿಗೆ ದುಡಿಯುವದು ಎಂದು ದುಡಿಯುವದು....ನಮ್ಮ ಎತ್ತುಗಳು ದುಡಿಯುವ ಹಾಗೆಯೆ ದುಡಿಯುವದು....ಅದಕ್ಕಿಂತ ಹೆಚ್ಚಿನ ಜೀವನ ಏನು ಗೊತ್ತು ಈ ಹಳ್ಳಿಯ ಮುದುಕಿಗೆ...ಪಶುಗಳಿಗೂ ಮನುಷ್ಯರಿಗೂ ಇಲ್ಲಿ ಯಾವ ಭೇದವೂ ಇಲ್ಲ.... ಅಜ್ಞಾನದ ದುಡಿಮೆಯಿದು....ಮನುಷ್ಯತ್ವವಿಲ್ಲದ ದುಡಿಮೆಯಿದು....'

'ನನಗೆ ಹೀಗೆ ದುಡಿಯಲು ಸಾಧ್ಯವೆ?....'

ಸಾಧ್ಯವಿಲ್ಲ ಎಂದು ಕೂಗು ಹಾಕಿತು ಅವಳ ಹೃದಯ 'ಹಾಳಾಗಲಿ' ಎಂದು ಮತ್ತೆ ಮಲಗಲೆತ್ನಿಸಿದಳು. ಆದರೂ ನಿದ್ರೆ ಬರಲಿಲ್ಲ. ಬೆನ್ನಟ್ಟಿನಿಂತ ಭೂತದಂತೆ ಮತ್ತೆ ಮತ್ತೆ ಅವಳ ಸ್ಮೃತಿಪಟಲದ ಮೇಲೆ ಲೀಲೆ ಸಂಜೆ ಕೇಳಿದ ಆ ಪ್ರಶ್ನೆ ಪ್ರಶ್ನಾರ್ಥಕ ಚಿನ್ಹೆಯನ್ನಿಟ್ಟುಕೊಂಡು ಮೂಡುತ್ತದೆ.

'ಅವರ ನಿನ್ನ ದಾರೀವಳಗ ಬರಲಿಲ್ಲಂದ್ರ ನೀಯಾಕ ಅವರ ದಾರಿವಳಗ ನಡೀ ಬಾರ್ದು?....'

ಏಕೆ ನಡೆಯಬಾರದು? ಎಂದೇ ಸೀತೆ ಯೋಚಿಸುತ್ತಲಿದ್ದಾಳೆ. ನಡೆದರೆ ಸಂಸಾರದಲ್ಲಿ ಸಂತೋಷ ಎನ್ನುವದು ಕಾಲು ಚಾಚಿ ನಿಂತೀತೇನೊ ಎಂದು ಆಸೆ. ಆದರೆ ಆ ಆಸೆಗಾಗಿ ತನ್ನ ಪ್ರೇಮವಿವಾಹದಲ್ಲಿ ಕಟ್ಟಿದ ಕನಸು ಒಡೆದು ಹೋಗುವದಲ್ಲ ಎಂದು ದುಃಖ. ಜತೆಗೆ ಹಳ್ಳಿಯ ಜನರಂತೆ

ಪಶುಸಮಾನ ಬದುಕಿಗೆ ಬಲಿಯಾಗಬೇಕಲ್ಲ ಎಂದು ಕುದಿತ. ಇವೆಲ್ಲಕ್ಕಿಂತ ಹೆಚ್ಚಾಗಿ ಜಾಗ್ರತವಾದ ಅಭಿಮಾನ ತಲೆಎತ್ತಿ ಗಟ್ಟಿಯಾಗಿ ಅರಚುತ್ತದೆ.

ಸುಶಿಕ್ಷಿತಳಿಗೆ, ಸುಸಂಸ್ಕೃತಳಿಗೆ ಹಳ್ಳಿಯ ಬದುಕು ಒಗ್ಗಲಾರದು. ಜೀವನದ ಕಲ್ಪನೆಯಿಲ್ಲದವರು, ಬದುಕಿನ ಸುಖ ಅರಿಯದವರು ಯಂತ್ರದಂತೆ ದುಡಿಯುವದೇ ತಮ್ಮ ಕರ್ತವ್ಯ ಎಂದು ತಿಳಿದವರಿಗೆ ಮಾತ್ರ ಒಗ್ಗೀತು.

'ತಾನೂ ಹಾಗೆ ಪಶುಸಮಾನವಾಗಿ ಬಿದ್ದಿರಬೇಕೆ?- ಸ್ವಾತಂತ್ರ್ಯವಿಲ್ಲದೆ ಬೆಳಕಿಲ್ಲದೆ ಕತ್ತಲೆ ಕೋಣೆಯಲ್ಲಿ ಒದ್ದಾಡುತ್ತಿರಬೇಕೆ?–ಈ ಜನ್ಮದಲ್ಲಾದರೂ ಹಾಗೆ ಸಾಧ್ಯವೆ?....'

ಕಂಬನಿ ತುಂಬಿತು ಅವಳ ಕಣ್ಣುಗಳಲ್ಲಿ. ಒಂದು ಕ್ಷಣ ಅವಳು ತನ್ನ ಮದುವೆಗೆ, ಪ್ರೇಮಕ್ಕೆ ಬಲಿಯಾಗುವ ಹಿಂದಿನ ಕನಸನ್ನು ಮತ್ತೆ ಜ್ಞಾಪಿಸಿಕೊಂಡಳು.

ಅವರು ಹಿರಿಯ ಆಫೀಸರಾಗಬೇಕು. ತಾನು ಅವರ ಕೈಹಿಡಿಯಬೇಕು. ಕಾರಿನಲ್ಲಿ ತಿರುಗುವದು. ಸುಂದರ ಸೀರೆಗಳನ್ನು ವಸ್ತ್ರಗಳನ್ನು ಧರಿಸುವದು. ಕೈಗೆ ಕೈ ಹಿಡಿದುಕೊಂಡು ವಾಕಿಂಗಕ್ಕೊ, ಷೋಗೊ ಹೋದರೆ ತಮ್ಮನ್ನೆ ಬೀದಿಯಲ್ಲಿ ಅಲೆಯುವವರೆಲ್ಲ ಬೆರಗುವಟ್ಟು ನೋಡುತ್ತ–'ಎಂತಹ ಆದರ್ಶ ದಾಂಪತ್ಯ' ಎಂದು ಉದ್ಗಾರವೆತ್ತುತ್ತಿರಬೇಕು. ಅಡಿಗೆ, ನೀರು, ಸೇವಕರ ಮೇಲೆಲ್ಲ ತಾನು ದರ್ಪ ನಡೆಯಿಸುತ್ತಿರಬೇಕು. ಸಾಧ್ಯವಾದರೆ ಗಂಡನ ಮೇಲೂ.

ಎಂತಹ ಕನಸು ಅದು! ಬಹಳ ಹೊತ್ತಿನವರೆಗೂ ಆ ಗತ ಕಾಲದ ಕನಸನ್ನೆ ಹುಡುಗರು ಬಾಯಲ್ಲಿ ಪೇಪರಮಿಂಟು ಹಾಕಿಕೊಂಡು ಮೇಲಿಂದ ಮೇಲೆ ಚಪ್ಪರಿಸಿ ಬಾಯಿ ಸಿಹಿ ಮಾಡಿಕೊಳ್ಳುತ್ತಿರುವ ಹಾಗೆ ತಲೆಯಲ್ಲಿ ಚಪ್ಪರಿಸಿಕೊಳ್ಳುತ್ತಿದ್ದಳು ಸೀತಾ.

ಮೆಲ್ಲನೆ ಆ ಕನಸು ಕರಗಿ ನೀರಾಗಿ ಹರಿಯಲಾರಂಭಿಸಿತು. ಅದೇ ನೀರಿನಲ್ಲಿ ಅಸ್ಪಷ್ಟವಾಗಿ ಯಾರದೊ ಪ್ರತಿಬಿಂಬ ಕಾಣಿಸಿತು. ಒಳಗಣ್ಣಿನಿಂದ ಒಂದೇ ಸಮನೆ ಅದನ್ನೆ ನಿಟ್ಟಿಸಿ ನೋಡಿದಾಗ ಗುರುತು ಹತ್ತುವದಕ್ಕೆ ಅವಳಿಗೆ ಕಷ್ಟವಾಗಲಿಲ್ಲ.

ರಾಮುವಿನ ಸುಂದರ ಮೂರ್ತಿಯ ಪ್ರತಿಬಿಂಬ ಅದು ಕಾಲೇಜಿಗೆ ಹೊರಟು ನಿಂತ ಆ ಭಂಗಿ ಅವಳನ್ನು ಬಡಿದೆಬ್ಬಿಸಿತು. ಆ ಭಾವ ಭಂಗಿಯನ್ನು ಕಂಡು ಒಂದು ಕಾಲಕ್ಕೆ ಎಷ್ಟು ಸಂತಸ ಪಡುತ್ತಿದ್ದಳು ಸೀತೆ. ಅವನ ಬುದ್ಧಿವಂತಿಕೆ, ಕಾಲೇಜಿನಲ್ಲಿ ಅವನು ಪ್ರಮುಖನಾಗಿ ಮೆರೆಯುವದು, ಅವನ ಬರವಣಿಗೆ ಎಲ್ಲದಕ್ಕೂ ಮುಗ್ಧಳಾದಳು ಸೀತೆ. ಮುಗ್ಧಳಾಗಿದ್ದ ಸೀತೆ ಮನಸೋತಳು; ಅವನವಳಾದಳು.

'ತಾರುಣ್ಯದ ಹುಚ್ಚು ಆವೇಶ ಮನುಷ್ಯನನ್ನು ಯಾವ ಪಥಕ್ಕೆ ಹಚ್ಚುತ್ತವೊ ಅರಿತವರಾರು?....ಪ್ರೇಮವಿವಾಹ ಅನ್ನುವದೇ ಒಂದು ಮೂರ್ಖತನ. ತಾರುಣ್ಯದ ಅಪಕ್ವ ಮನಸ್ಸು ಮೋಹಕ್ಕೆ ಬಲಿಯಾದಾಗ ಆಗುವ ಅನಾಹುತ ಇದು....'

ನಿಧಾನವಾಗಿ ಉಸಿರು ಹಾಕಿದಳು ಸೀತೆ. ಸಂಗೀತ ಕಲಾವಿದ ಹಾಡಿ ಹಾಡಿ ಮತ್ತೆ ಪಲ್ಲವಿಯನ್ನೆ ಎತ್ತಿಕೊಳ್ಳುವಂತೆ ಮುಂದೋಡಲಾರದ ಅವಳ ಮನಸ್ಸೂ ಪಲ್ಲವಿಗೇ ಬಂದು ನಿಂತಿತು.

'ಅವರು ನನ್ನ ದಾರಿಯಲ್ಲಿ ಬರದೆ ಹೋದರೆ ನಾನೇಕೆ ಅವರ ದಾರಿಯಲ್ಲಿ ಹೋಗಬಾರದು ?....'

'ಹಾಗೇನಾದರೂ ಹೋದರೆ ಸರಿಯಾಗಬಹುದೇನೊ ಅರಿತವರಾರು?....'

ನಗರದ ಸ್ವಚ್ಛಂದ ವೃತ್ತಿಯ ಹಿಂದಿನ ಬದುಕು ಈ ವಿಚಾರಕ್ಕೆ ಪ್ರೋತ್ಸಾಹನೆಯನ್ನೀಯಲಿಲ್ಲ. ನಗರದಲ್ಲಿ ಹೊಳೆಯುವ ವಿದ್ಯುದ್ದೀಪದ ಹಾಗೆ ಹೊಳೆವ ಜೀವನದ ಮುಂದೆ ಹಳ್ಳಿಯ ಹಣತೆ 'ಮಬ್ಬಾಳ' ವಾಗಿ ಕಂಡಿತು.

'ಓ, ಈ ಬೆಳಕಿನಲ್ಲೂ ಎಷ್ಟು ಅಂತರ!....'

'ಹುಚ್ಚು!.... ಎರಡೂ ಬೆಳಕು ನೀಡುವ ಸಾಧನೆಗಳಾದರೂ ಅವುಗಳ ಪ್ರಭೆ ಎಷ್ಟು ಅಸಮಾನವಾಗಿವೆ.'

ಇನ್ನೊಂದು ಬಿಸಿಯುಸಿರು ಸೀತಳ ಹೃದಯವನ್ನೊಡೆದು ಬಂದಿತು. ಮುಂದಕ್ಕೆ ಓಡಲಾರದ ಮನಸ್ಸು ಅಲ್ಲೇ ಸುತ್ತುತ್ತಿತ್ತು. ಸುತ್ತುತ್ತ ಸುತ್ತುತ್ತಲೆ ಸೀತೆಯ ಕಣ್ಣುಗಳಲ್ಲಿ ನಿದ್ರೆ ತೂಗಲಾರಂಭಿಸಿತು.

೪

ಮರುದಿನ ಸಂಜೆ ಕಟ್ಟೆಯ ಮೇಲೆ ಹಾಸಿದ ಗುಡಾರದ ಮೇಲೆ ಟೆಕ್ಕೆಗೆ ಆತು ರಾಮು-ರಾಘು ಹರಟೆ ಹೊಡೆಯುತ್ತ, ತಮ್ಮ ಈಚೆಗಿನ ಅನುಭವವನ್ನು ಕತೆ ಮಾಡಿ ಹೇಳುತ್ತ ಕುಳಿತುಕೊಂಡಿದ್ದರು.

ಸಂಜೆಯಾಗಸ ನಿರಭ್ರ ನಿಚ್ಚಳವಾಗಿತ್ತು. ಬಾಂದೇವಿಯ ಮೈತುಂಬ ಪುಷ್ಪಗಳನ್ನು ಚೆಲ್ಲುವರಿಯುತ್ತಿರುವ ಹಾಗೆ ತಾರೆಗಳು ಮೂಡುತ್ತಿದ್ದವು. ಸ್ವಲ್ಪ ಸ್ವಲ್ಪಾಗಿ ಕಾಲುಚಾಚುತ್ತಿರುವ ಕತ್ತಲೆಯಲ್ಲಿ ಅವುಗಳ ಕಿರುಬೆಳಕು ಮೊದಲಿಗಿಂತಲೂ ಹೆಚ್ಚಾಗುತ್ತಿತ್ತು.

'ಕುಡು ಕುಡು ಕುಡುಕ್....'

'ಚೆಯಕ್ಕ ಚೆಯ್ಯ ಚೆಯ್ಯ....'

'.... ತಾ.... ನ.... ನ.... ನ....'

ಇದೆಲ್ಲ ಹಳ್ಳಿಯ ವಾದ್ಯಗಳನ್ನೂ ಮೀರಿಸುವಂತೆ ಹಲಗೆಯ ಸದ್ದು ಕರಡಿ, ಚೌಗಡಗಳಲ್ಲಿ ಒಂದಾಗಿ, ಸನಾದಿಯಲ್ಲಿ ಬೆರೆತು. ಜೋಡು ತಾಳಗಳಲ್ಲಿ ಕೂಡಿ ಒಂದು ವಿಚಿತ್ರವಾದ, ಆದರೂ ಇಂಪಾದ ಸ್ವರ ಹಠಾತ್ತನೆ ಅವರಿಗೆ ಕೇಳಿಸಿತು. ಸಂಜೆಯ ಮೆಲುಗಾಳಿಯಲ್ಲಿ ತೇಲಿಕೊಂಡು ಬಂದು ಇಂತಹ ಸರಸವಾದ ವಾದ್ಯವಾದನವನ್ನು ಕೇಳದ ರಾಘು ಒಂದೇ ಸಲಕ್ಕೆ ಸೋತು ಹೋದ ಆ ಮೋಳೈಸಿದ ಸ್ವರದ ಮುಂದೆ ಬ್ಯಾಂಡು ವಾದನವೂ ಕರ್ಕಶ ಕಠೋರವೆನ್ನಿಸಿತು ಅವನಿಗೆ. ಮೆಲ್ಲನೆ ಅವನಿಗರಿಯದ ಹಾಗೆ ಅವನ ತಲೆ ಅಲುಗಾಡಿ ಹೃದಯದ ಸಮ್ಮತಿಯನ್ನು ಹೊರಗೆಡಹಿತು. ರಾಮು ಅವನ ಈ ಸ್ಥಿತಿಯನ್ನು ಕಂಡು ನಕ್ಕು ಹೇಳಿದ.

'ಹಳ್ಳಿಯ ಹುಂಬರೇನೋ ಬಾರಸ್ತಾರ. ಅದಕ ನೀ ತಲಿ ಹಾಕುತೀಯಲ್ಲೋ'

'ಯಾರರ ಬಾರಸವಲ್ಲರ‍್ಯಾಕ ಆದ್ರ ಇದಕ ಏನಂತಾರೋ ರಾಮು?' ಕುತೂಹಲ ರಾಘುವಿನ ಶಬ್ದ ಶಬ್ದದಲ್ಲಿಯೂ ಉಕ್ಕುತ್ತಿತ್ತು.

'ಇದಕ 'ಕರಡೀ ಮಜಲ' ಅಂತಾರ. ಯಾವದಾರ ಶುಭ ಕಾರ್ಯದಾಗ, ದೇವರ ಉತ್ಸವದಾಗ ಇದ್ನ ಬಾರಸತಾರ'

'ಎಷ್ಟ ಛಂದ ಬಾರಸ್ತಾರೊ ರಾಮುಽ. ಇದರ ಮುಂದ ನಮ್ಮಬ್ಯಾಂಡ ವಾದನ ನಿವಾಳಿಸಿ ಒಗೀಬೇಕ ನೋಡು.'

ರಾಘು ತನ್ನ ಹೃದಯದಲ್ಲಿ ಮೂಡಿದ ನಿಷ್ಪಕ್ಷಪಾತವಾದ ವಿಮರ್ಶೆಯನ್ನು ಹೊರಗೆ ಹಾಕಿದ. ಅವನ ಮನದಲ್ಲಿ 'ಹಳ್ಳಿ ಕಾಡು' ಎಂದಿದ್ದ ವಿಚಾರ ಈಗ ಎಲ್ಲಿ ಪಲಾಯನ ಹೇಳಿತ್ತೊ! ಹಳ್ಳಿಯ ಸಂಸ್ಕೃತಿ ಗೆದೆಯುವದಕ್ಕಿಂತ ಮೊದಲು ಅವನ ಅಂತಃಕರಣವನ್ನು ಪಲ್ಲಿಯ ಕಲೆ ಗೆದ್ದುಕೊಂಡಿತ್ತು. ಈ ವಿಮರ್ಶೆಯಿಂದ ರಾಮುವಿಗೆ ತುಂಬ ಸಂತೋಷವಾಗಿದ್ದರೂ ಅದನ್ನು ಗೆಳೆಯನೆದುರು ತೋರಗೊಡದೆ ಹೇಳಿದ.

'ಇಷ್ಟರ್ಽ ನಮ್ಮ ಹಳ್ಳಿನ ಒಪ್ಪಿದ್ಯಲ್ಲ ಮಹರಾಯಽ.'

'ಬಂದೀನಿ ಅಂದಮ್ಯಾಲೆ ಒಪ್ಪಲಿಕ್ಕೇ ಬೇಕಲ್ಲ ರಾಮುಽ. ಇಲ್ಲಾಂದ್ರ ನೀವ ಕೇಳತೀರ್ಯಽ ಹಳ್ಳಿಯ ಮಂದಿ; ಜುಲಮೀಯಿಂದಾರ ಒಪ್ಪಸತೀರಿ.

ಅಷ್ಟರಲ್ಲಿಯೆ ಊರಿನ ಮುಖಂಡ- ಊರಿನ ಹಿರಿಯ ರೈತ ಚನ್ನಪ್ಪ ರಾಮುವಿನ ಬಳಿಗೆ ಬಂದು ಹೇಳಿದ.

'ಯಪ್ಪಽವ್ರ ಗಡಽ ನಡೀರಿ ಹುಚ್ಚಯ್ಯಾ ಎದ್ದೇತಿ....'

'ಹೋಗೂಣಽ ರಾಘುಽ?'

'ಏನಪ್ಪಽ ನಿಮ್ಮ ಭಾಷ್ಯ. ನನಗ ಏನೂ ತಿಳಿಯೂದ ಇಲ್ಲಲ್ಲೊ? ಹುಚ್ಚಯ್ಯಾ ಅಂದ್ರೇನ್ಽ?'

'ಹ- ಹ- ಉತ್ಸವಕ್ಕ ಹುಚ್ಚಯ್ಯಾ ಅಂತಾರ.ಮುಂಜ್ಯಾನ್ನದಾಗ ಹೋಳಗಿ ಹೊಡದೂ ನಿನಗ ಗೊತ್ತಾಗಲಿಲ್ಲೇನು? ಇವತ್ತ ರಾಮಲಿಂಗನ ಉತ್ಸವ.'

'ಹಂಗಽ....! ನನಗೇನ ಗೊತ್ತಾಗಬೇಕದೆಲ್ಲಽ?'

'ಅದೆಲ್ಲ ಹೋಗಲಿ, ಈಗ ಅದನ್ನ ನೋಡಲಿಕ್ಕೆ ಹೋಗೂಣೇಳು.'

ಎಂದು ರಾಘುವಿನ ಉತ್ತರದ ದಾರಿಯನ್ನೂ ಕಾಯದೆ ಎದ್ದು ನಿಂತು ಬಿಟ್ಟ ರಾಮು. ಕರಡಿ ಮಜಲನ್ನು ಕೇಳಬೇಕೆಂಬಾಸೆಯಿಂದ ರಾಘು ಪ್ರತಿಯಾಗಿ ಏನನ್ನೂ ಹೇಳಲಿಲ್ಲ. ಜತೆಗೆ ಸೀತೆ ಲೀಲೆಯರನ್ನು ಕರೆದುಕೊಂಡು ಹೊರಟು ಬಿಟ್ಟರು. ಸೀತೆ ಮನಸ್ಸಿಲ್ಲದಿದ್ದರೂ ಅತಿಥಿಗಳೆದುರು ತನ್ನ ಹಟ ಪ್ರದರ್ಶಿಸಬಾರದೆಂದು ಹೊರಟಿದ್ದರೆ ಹಳ್ಳಿಯನ್ನು ಕಂಡ ಉಬ್ಬಿನಲ್ಲಿ ಲೀಲೆ ಪತಿಯ ಜತೆಗೆ ಕೂಡಿ ಹೋಗುವದು ನಾಚಿಕೆಗೆಟ್ಟ ಮಾತು ಎಂಬುದನ್ನೆ ಮರೆತಿದ್ದಳು.

ಚನ್ನಪ್ಪ ಅವರನ್ನೆಲ್ಲ ಚಾವಡಿಗೆ ಕರೆದು ತಂದ. ಚಾವಡಿ ತಲಪಿದೊಡನೆ 'ಜರಕಾಟಿ' ರುವಾಲ ಸುತ್ತಿದ ಹಿರಿಯ ರೈತನೊಬ್ಬ ಜಾಗಿರ್ದಾರ್ರು ಬಂದ್ರು....ಧನೇರು ಬಂದ್ರು....ಎಂದು ಹೇಳಿದೊಡನೆಯೆ ಮುಸಿ ಸೀದುತ್ತಲೊ ಹರಟೆ ಹೊಡೆಯುತ್ತಲೊ ಕುಳಿತ ಹಳ್ಳಿಯ ಜನ ಅತ್ತ–ಇತ್ತ ಸರಿಯಿತು. ಒಂದು ರೀತಿಯ ಶಾಂತ ವಾತಾವರಣ ಅಲ್ಲಿ ನೆಲೆಸಿಂತಿತು ಊರಿನ ಗೌಡ ಕರಣಿಕರು ವಿನಯದಿಂದ ಅವರಿಗೆಲ್ಲ ನಮಸ್ಕರಿಸಿದರು. ಪ್ರತಿ ನಮಸ್ಕಾರಗಳಾದ ಮೇಲೆ ಅಲ್ಲಿಯೆ ಹಾಸಿದ ಗುಡಾರದ ಮೇಲೆ ಅವರೆಲ್ಲ ಕುಳಿತುಕೊಂಡರು.

ಚಾವಡಿ ಎದುರಿಗೇ ರಾಮಲಿಂಗನ ಗುಡಿ. ಇಂದು ಆ ದೇವರ ಉತ್ಸವವಾದ ಮೂಲಕ ಭಾರಿ ಪೂಜೆ–ಪುರಸ್ಕಾರ ನಡೆದಿತ್ತು. ಚಂಡು ಹೂ, ಗುಲಾಬಿ ಮೊದಲಾದ ಹೂಗಳು ದೇವರ ಅರ್ಧಭಾಗವನ್ನೆ ಮುಚ್ಚಿಬಿಟ್ಟಿದ್ದವು. ಅದರ ಮೇಲ್ಗಡೆಗೆ ಗಂಧದ ಮೂರು ಬೆರಳಿನ ಅಡ್ಡ ನಾಮ. ಅದರ ಮಧ್ಯದಲ್ಲಿ ರೂಪಾಯಿಯಗಲ ಕುಂಕುಮದ ಬೊಟ್ಟನ್ನಿಟ್ಟಿದ್ದರು.

ಜನರ ಗುಂಪು —ಗದ್ದಲ ನಿಮಿಷ, ನಿಮಿಷಕ್ಕೂ ಹೆಚ್ಚಾಗುತ್ತಲಿತ್ತು. ಹೆಣ್ಣು ಗಂಡು ಎಂಬ ಭೇದಭಾವವೂ ಇಲ್ಲದೆ ಆ ಗ್ಯಾಸಿನ ಬೆಳಕಿನಲ್ಲಿ, ಚಾವಡಿಯ ಕಟ್ಟೆಯ ಮೇಲೆ ಗುಂಪು ಗುಂಪಾಗಿ ಹಳ್ಳಿಗರು ಬರುತ್ತಲೇ ಇದ್ದರು. ಅವರ ಉತ್ಸವ, ಉತ್ಸಾಹ ಇಂದು ಹೇಳತೀರದು. ಅವರ 'ಚೇಕಾಟ' ಕೂಗಾಟಗಳು ಅವರ ಹೃದಯದಲ್ಲಿದ್ದ ಆನಂದದ ತರಂಗಗಳನ್ನು ಹೊರಗೆ ಹಾಕುತ್ತಿದ್ದವು.

ರಾಘು ಅವರ ಹರ್ಷೋದ್ಗಾರಗಳನ್ನು ಕೇಳುತ್ತ ಅವರೆಡೆಗೆ ತಿರುಗಿ ನೋಡಿದ. ಅವರನ್ನು ನೋಡುತ್ತಿರುವಂತೆಯೆ ಅವನಿಗೆ– 'ಹಳ್ಳಿಗರು ತುಂಬ ದುಡುಮೆಗಾರರು ನಿಜ. ಕತ್ತೆ ದುಡಿದಹಾಗೆ ದುಡಿಯುತ್ತಾರೆಂದು ಅದರ ಅರ್ಥವಲ್ಲ. ಅವರಿಗೂ ಆಸೆ–ಆಕಾಂಕ್ಷೆ, ಕನಸು–ನೆನಸು, ಸುಖ–ದುಃಖ–ಎಲ್ಲ ಇವೆ. ಸರಿಯಾದ ರೀತಿಯಲ್ಲಿ ಸಾಮೂಹಿಕವಾಗಿಯೆ ಅವರು ಅವುಗಳಲ್ಲಿ ಪಾಲುಗೊಳ್ಳುತ್ತಾರೆ. ನಗರದಲ್ಲಿಯಂತೆ ಇಲ್ಲಿ ವೈಯುಕ್ತಿಕ ಕುಟುಂಬಕ್ಕೆ, ವೈಯಕ್ತಿಕ ಸ್ವಾರ್ಥಕ್ಕೆ ಬೆಲೆಯಿಲ್ಲ. ಎಲ್ಲರೂ ಒಂದಾಗಿ ಒಂದು

ಕುಟುಂಬವಾಗಿ ಬಂದ ಸಂಕಟ–ಸಂತೋಷಗಳಲ್ಲಿ ಭಾಗಿಗಳಾಗುತ್ತಾರೆ....' ಎಂಬದು ಹಿಂದೆ ಬರೆದ ರಾಮುವಿನ ಕಾಗದ ಜ್ಞಾಪಕವಾಯಿತು. ಅದು ಅಸತ್ಯದಿಂದ ಬಣ್ಣ ಬಳಿದುಕೊಂಡು ಬಂದಿಲ್ಲ ಇಂದು ಅವನಿಗೆ ಖಚಿತವಾಯಿತು. ಜತೆಗೆ–'ಸಾಮೂಹಿಕ ಜೀವನದಲ್ಲಿ ಇವರು ಎಷ್ಟೊಂದು ಸಮಭಾಗಿಗಳು!....' ಎನ್ನಿಸಿತು. ಇಂತಹ ಸಾಮೂಹಿಕ ಬದುಕನ್ನು ನಗರದಲ್ಲಿ ಅವನು ಕಂಡಿರಲಿಲ್ಲ. ಸಂಘ–ಸಂಸ್ಥೆಗಳಲ್ಲಿ ಅಲ್ಪ–ಸ್ವಲ್ಪ ಕಂಡುಬಂದರೂ ಇಂತಹ ಒಂದುತನ–ಒಕ್ಕಟ್ಟು ಕಂಡಿರಲಿಲ್ಲ.

'ಇವರೆಲ್ಲ ಘೋಷಬಿಟ್ಟು ಹೊರಗೆ ಬಂದಿದ್ದಾರಲ್ಲ! ಇಷ್ಟು ಸ್ವಾತಂತ್ರ್ಯವಿದೆಯೆ?....'ಎಂದು ಸ್ತ್ರೀಯರನ್ನು ನೋಡುತ್ತ ಸೀತೆ ಯೋಚಿಸುತ್ತಿದ್ದಳು. ಇವೆಲ್ಲ ಅವಳಿಗೆ ವಿಚಿತ್ರವಾಗಿ ತೋರುತ್ತಿತ್ತು. ಅವರ ನಡವಳಿಕೆ ಅವಳಿಗೆ ಅರ್ಥವಾಗದೆ ಹೋಗಿತ್ತು. ಹಿಂದೆ ಕಟ್ಟೆಯ ಮೇಲೆ ಕುಳಿತು ಹರಟುತ್ತಿದ್ದ ಹೆಂಗಸರು ತಮ್ಮನ್ನು ಕಂಡು ಓಡಿಹೋದರು-ಇಷ್ಟು ಧೈರ್ಯದಿಂದ, ಇಷ್ಟು ಸಮಸಮವಾಗಿ ಗಂಡಸರ ಜತೆಗೆ ನಿಂತಿದ್ದನ್ನು ಕಂಡು ಅವಳ ಮನಸ್ಸು ಯಾವ ನಿರ್ಧಾರಕ್ಕೂ ಬಾರದೆ ತೊಳಲುತ್ತಿತ್ತು. ತನ್ನನ್ನು ತಾನೇ ನಂಬಲಾಗದ ಸ್ಥಿತಿಗೆ ಬಂದಿತ್ತು.

ಕರಡಿ ಮಜಲು ತೀರ ಹತ್ತಿರವಾಯಿತು. ಎಲ್ಲರ ದೃಷ್ಟಿಗಳೂ ಅತ್ತ ತಿರುಗಿದವು. ಬಾರಿಸುವ ಕಲಾವಿದರ ಕೈವಾಡಕ್ಕೆ ಎಷ್ಟೋ ತಲೆಗಳು ತಲೆ ಹಾಕುತಿದ್ದವು. ಸಾವಿರಾರು ಕಣ್ಣುಗಳು ಕುತೂಹಲದಿಂದ ಅತ್ತ ನಿರುಕಿಸುತ್ತಿದ್ದವು. ಕರಡಿ ಮಜಲು ಕೊನೆಗೂ ಚಾವಡಿಯ ಮುಂದೆ ಬಂದಿತು. ಬಾರಿಸುವವರ ಹಿಂದುಗಡೆಗೆ ಹಳ್ಳಿಯ ತರುಣರ ಗುಂಪು ಹಣೆಯ ಉದ್ದಕ್ಕೂ ಬುಕ್ಕಿಟ್ಟಿನ ನಾಮ ಎಳೆದುಕೊಂಡು, ಹೊಸ ಅರಿವೆ-ಅಂಚಡಿ ತೊಟ್ಟುಕೊಂಡು, ಜರದ ರುಮಾಲವನ್ನೊ, ಪಟಗವನ್ನೊ ಸುತ್ತಿಕೊಂಡು ಬರುತ್ತಲಿತ್ತು. ಬಡವ ಬಲ್ಲಿದವರೆಂಬ, ಮೇಲು, ಕೀಳುಗಳೆಂಬ ಯಾವ ತಾರತಮ್ಯ ಭಾವನೆಯೂ ಅಲ್ಲಿರಲಿಲ್ಲ. ಅವರ ಹಿಂದೆ ನಂದೀಕೋಲು ಮುಗಿಲನ್ನು ಮುದ್ದಿಸುವ ತೆರದಲ್ಲಿ ನಿಂತಿತ್ತು. ಅದರ ಮಧ್ಯದಲ್ಲಿ ಕಂಚಿನ ಬಸವಣ್ಣನ ಪ್ರತಿಮೆ ಶುಭ್ರವಾಗಿ ಬೆಳಗಿಸಿಕೊಂಡು, ಹಣೆಗೆ ವಿಭೂತಿ ಬಳಿದುಕೊಂಡು ಗ್ಯಾಸಿನ ಬೆಳಕಿನಲ್ಲಿ ಲಕಲಕಿಸುತ್ತಿತ್ತು. ಆ ಕೋಲಿನ ಹಿಂದೆಯೆ ಒಕ್ಕಲಿಗ

ಮುತ್ತೈದೆಯರೆಷ್ಟೋ ಜನ ತಮ್ಮ ಎರಡೂ ಕೈಗಳಲ್ಲಿ ಹರಿವಾಣ ಹಿಡಿದುಕೊಂಡು ಬರುತ್ತಿದ್ದರು. ಆ ಹರಿವಾಣದ ಮಧ್ಯಕ್ಕೆ ಕಂಚಿನ ಹಾಗು ಮಣ್ಣಿನ ಎತ್ತಿನ ಮೂರ್ತಿಗಳು. ಅವುಗಳ ಎರಡೂ ಪಕ್ಕಕ್ಕೆ ಎರಡು ನೀಲಾಂಜನ ದೀಪಗಳು ಅಲ್ಲದೆ ಕುಂಕುಮದ ಕಿರಿಯ ಬಟ್ಟಲು ಬೇರೆ. ಇಲಕಲ್ಲ ಸೀರೆ ಉಟ್ಟು, ಜರದ ಅಂಚಿನ ಕುಪ್ಪಸ ತೊಟ್ಟು ಹಣೆ ತುಂಬ ವಿಭೂತಿ–ಕುಂಕುಮ ಬಳಿದುಕೊಂಡು ದೇವರ ಮೇಲೆ ಜಾನಪದ ಗೀತೆಗಳನ್ನು ಹಾಡುತ್ತಿದ್ದರು. ಎಲ್ಲ ಸ್ತ್ರೀ ಕಂಠಗಳೂ ಒಂದಾಗಿ ಹೊರಹೊಮ್ಮುವ ಏಕನಾದ ತರಂಗಿಣಿಯ ಸ್ವರ ತುಂಬ ಇಂಪಾಗಿತ್ತು. ಯಾರನ್ನೂ ತಣಿಸುವ ಹಾಗಿತ್ತು.

ಆದರೆ ರಾಘುವಿಗೆ ಮಾತ್ರ ಇದೊಂದು ಅರ್ಥವಾಗಲಿಲ್ಲ. ಅವನು ಕತ್ತೆತ್ತಿ ರಾಮುವನ್ನು ನೋಡಿದ. ಅವನ ಮೊಗದಲ್ಲಿ ಕೆಣಕುವ ನಗೆ ನೆಲೆ ನಿಂತಿತ್ತು.

ಕರಡಿ ಮಜಲಿನ ವಾದ್ಯಗಾರರು ಇಂಪಾದ ಸ್ವರದಲ್ಲಿ ಅರ್ಧಗಂಟೆಯ ಕಾಲ ಕುಣಿ–ಕುಣಿದು ಬಾರಿಸಿದರು. ಅದನ್ನು ಕೇಳುತ್ತಿರುವಂತೆಯೆ ಎಲ್ಲರ ಎದೆಗಳಲ್ಲಿ ಉತ್ಸಾಹ, ಆನಂದಗಳ ಬುಗ್ಗೆ ಚಿಮ್ಮುತ್ತಿದ್ದವು ರಾಘುವಂತೂ– 'ಇದು ನಮ್ಮ ವಾದ್ಯ; ಭಾರತೀಯರ ನಿಜವಾದ ವಾದ್ಯ' ಎಂದು ಮನದಲ್ಲಿಯೆ ಸಾವಿರ ಸಲ ಹೇಳಿಕೊಂಡ.

ವಾದ್ಯಗಾರರು ತಮ್ಮ ವಾದ್ಯ ಬಾರಿಸುವದನ್ನು ನಿಲ್ಲಿಸಿದರು. ಅನಂತರ ಆ ಎತ್ತರವಾದ, ದಪ್ಪನಾದ ನಂದೀಕೋಲನ್ನು ಎತ್ತಲು ತರುಣರು ರಾಮಲಿಂಗನಿಗೆ ಕೈಮುಗಿದು ಮುಂದಾದರು. ದೇವರ ಮುಂದಿನ ಆ ಬಯಲಿನ ಗುಂಪು ಹಿಂದೆ ಸರಿದು ದುಂಡಗಾಯಿತು ಎಷ್ಟೋ ತರುಣರು ಎತ್ತಲು ಪ್ರಯತ್ನಿಸಿ ವಿಫಲರಾದರು. ಆಗ ಅವರ ಮೊಗಗಳಲ್ಲಿ ನಿರಾಸೆಯ, ಸೋಲಿನ ಛಾಯೆ ಮೆಲ್ಲನೆ ನುಸುಳುತ್ತಿತ್ತು. ಜನರ ಕೂಗು ಕೇಕಾಟಗಳು ಅವರ ಅಮಿತ ಉತ್ಸಾಹದ, ಸಂತೋಷದ ಪ್ರತಿಧ್ವನಿಯಾಗಿ ಹೊರಹೊಮ್ಮುತ್ತಿದ್ದವು. 'ಸಂತೋಷ ಇವರಿಗೂ ಇದೆ' ಎಂದು ಸಾರುತ್ತಿದ್ದವು.

ರಂಗ ಆ ನಿಂತ ಜನರ ಮಧ್ಯದಿಂದ ಮುಂದೆ ಬಂದ. ಅವನ ಹರವಾದ ನೈಕಟ್ಟು, ಆತ್ಮವಿಶ್ವಾಸದಿಂದ ಇಡುತ್ತಿದ್ದ ಹೆಜ್ಜೆ, ನಂದೀಕೋಲನ್ನೇ ನಿಟ್ಟಿಸಿ ನೋಡುವ ಅವನ ಅಭಿಮಾನದ ಕಂಗಳ ದಿಟ್ಟೆ ಗೆಲವು ಅವನದೇ ಎಂದು ಸಾರುತ್ತಿದ್ದವು. ಜನ ಅವನನ್ನು ಕಂಡೊಡನೆಯೆ ಒಂದು ಸಲ 'ಜಯ ಬಸವಣ್ಣಾ' ಎಂದು ಕೂಗುಹಾಕಿತ್ತು.

ರಾಘುವಿನ ಮೈಯಲ್ಲೂ ವೀರಶ್ರೀ ಸ್ಫುರದ್ರೂಪಿಸಿದ ಹಾಗಾಗಿ ಅವನು ರಾಮುವಿನೆಡೆಗೆ ತಿರುಗಿದ. ರಾಮು ಅವನನ್ನು ನೆಟ್ಟನೋಟದಿಂದಲೆ ನೋಡುತ್ತಿದ್ದ. ರಾಘು ಮೆಲ್ಲನೆ ಅವನ ಕಿವಿಯಲ್ಲುಸುರಿದ.

'ಇವ ನಿಮ್ಮ ರೈತಲ್ಲs?'

'ಹೌದು ರಾಘು'

ಮತ್ತೆ ಅಲ್ಲೆಲ್ಲ ಮೌನ ಪಸರಿಸಿತು. ಹೆಮ್ಮೆಯಿಂದ ನಂದೀ ಕೋಲನ್ನೆತ್ತಲು ಕೈಯಿಕ್ಕಿದ ರಂಗನನ್ನೆ ರೆಪ್ಪೆ ಮಿಟಕಿಸದೆ ಜನ ನೋಡ್ತು ತ್ತಲಿತ್ತು. ಅವನ ಸಾಹಸವನ್ನು ತದೇಕ ಚಿತ್ತದಿಂದ ನಿರುಕಿಸುತ್ತಿತ್ತು.

ಮೆಲ್ಲನೆ ಅವನು ಕೋಲನ್ನು ಮೇಲಕ್ಕೆತ್ತಿದ. ಕೋಲು ಮೇಲಕ್ಕೆ ಹೋಗುತ್ತಿರುವ ಹಾಗೆ ಹಳ್ಳಿಗರ ದೃಷ್ಟಿಯೂ ಹಾಗೆಂಪೆ ಅವನನ್ನೊಂದುಸಲ, ಕೋಲನ್ನೊಂದು ಸಲ ನೋಡುವದರಲ್ಲಿ ಸಮರಸವಾಗುತ್ತಿತ್ತು.

ಕೋಲು ಅವನ ಭುಜದ ವರೆಗೆ ಮೇಲೆದ್ದಿತು.

ಅವನು ಅದನ್ನು ಇನ್ನೊಂದು ಕ್ಷಣದಲ್ಲಿ ಭುಜದ ಮೇಲಿಟ್ಟುಕೊಂಡ.

ಚಪ್ಪಾಳೆಗಳ ಸದ್ದು! ಆನಂದದ ಕರತಾಡನ!! 'ಭಪ್ಪರೆ ಮಗನs;' 'ಹೌದ ಅಂದೇನೋ ನಮ್ಮಪ್ಪs' ಎಂಬ ಹಳ್ಳಿಗರ ಹೃದಯ ಹಿಡಿಸಲಾರದೆ ತುಂಬಿ ಬಂದ ಮೆಚ್ಚಿಕೆಯ, ಹರುಷದ ಧನ್ಯವಾದಗಳು!!!

ಆ ದೃಶ್ಯದಿಂದ ರಾಘು ಮೂಕನಾಗಿದ್ದ. ಎಲ್ಲರಂತೆ ಅವನ ಹೃದಯ ದಲ್ಲೂ ಆನಂದ ತನ್ನ ಗುಡಿ ಕಟ್ಟಿತ್ತು. ಮನಸ್ಸು ಹಿಗ್ಗಿತ್ತು. 'ಇದು ನಮ್ಮ ಧೀರತನ' ಎಂದು ಹೃದಯ ಒಡನುಡಿಯುತ್ತಿತ್ತು.

ಮೆಲ್ಲನೆ ಬಹಳ ಮೆಲ್ಲನೆ ರಂಗನು ಭುಜದ ಮೇಲೆ ಹೊತ್ತುಕೊಂಡ ನಂದೀಕೋಲನ್ನು ಕೆಳಗಿಳಿಸಿದ. ಹೆಮ್ಮೆಯ, ಸಾಹಸದ ನಗೆ ರಂಗನ ತುಟಿಗಳಲ್ಲಿ ಮಿನುಗಿತು.

ತಾಟನಲ್ಲಿ ಆರತಿ ಇಟ್ಟುಕೊಂಡು ಮೌನವಾಗಿ ನಂದೀಕೋಲು ಎತ್ತುವ ರಂಗನ- ಶಕ್ತಿಯನ್ನು ನೋಡುತ್ತ ನಿಂತ ಗರತಿಯರು ಈಗ ಮುಂದಾಗಿ ಬಂದು ಜಾನಪದ ಹಾಡೊಂದನ್ನು ಹಾಡಿ ಆರತಿ ಬೆಳಗಿ ಕುಂಕುಮ ಹಚ್ಚಿದರು. ಅವನಿಗೆ ಆಗ ಅವರ ಮೊಗದಲ್ಲಿ ಹೆದರಿಕೆಯ, ಅಳುಕಿನ ಭಾವ ವಿರಲಿಲ್ಲ. ಶಾಂತಿಯ, ಸಂತೋಷದ ಭಾವ ಕುಡಿವೆರೆದಿತ್ತು.

ಸೀತಾ ಹಳ್ಳಿಯ ಹೆಣ್ಣುಮಕ್ಕಳ ಆ ಧೈರ್ಯದ, ಹರುಷದ ಭಾವ ಕಂಡು ಬೆಕ್ಕಸ ಬೆರಗಾಗಿದ್ದಳು. ತನ್ನ ಬಾಳಿನಲ್ಲಿ ಅವಳು ಅಂತಹ ಸುಂದರ ದೃಶ್ಯ ಕಂಡಿರಲಿಲ್ಲ. ಹಿಂದೆ ದೊರೆತ ಆರತಿ ಬೆಳಗಿಸಿಕೊಂಡು ವಿಜಯದ ಹಾಡು ಹಾಡುವ ಅಮರ ದೃಶ್ಯಗಳನ್ನು ಅವಳು ಹಳೆಯ ಕಾವ್ಯಗಳನ್ನು ಓದುತ್ತಿದ್ದಾಗ ಮಾತ್ರ ಕಂಡಿದ್ದಳು. ಆ ದೃಶ್ಯದ ಸಾಕ್ಷಾತ್ಕಾರವಾಗಿತ್ತಿಂದು ಅವಳಿಗೆ. ಅವಳು– ' ರಂಗ ಪಥ್ಯ ಇಲ್ಲಿಯ ಅನಭಿಷಿಕ್ತ ಅರಸು!........ ಹಳ್ಳಿಯಲ್ಲಿ ಆ ಸಾಂಪ್ರದಾಯ ಪರಂಪರಾಗತವಾಗಿ ಬಂದಿದೆಯಲ್ಲ!........ ನಗರವಲ್ಲ ನಾನೊಂದು ದಿನವೂ ಇಂತಹ ಸಾಮೂಹಿಕ ಸಂತೋಷದಲ್ಲಿ ಭಾಗಿಯಾಗಿರಲಿಲ್ಲ.... ಎಂದು ಯೋಚಿಸುತ್ತಿದ್ದಳು.

ಸೀತಳ ಆ ಯೋಚನೆ,ಆ ವಿಚಾರ ಅವಳೆಂದೂ ಕಾಣದ ಭವ್ಯ ಬೆಳಕಿನ ದರ್ಶನ ಮಾಡಿಸಿತ್ತು. ಆ ಬೆಳಕನ್ನು ನೋಡುತ್ತ ತನ್ನನ್ನೇ ತಾನು ಮರೆತಳು.

ಅಂತಹದೆ ವಿಚಾರ ರಾಘುವಿನಲ್ಲೂ ಮೂಡಿದೆ.– ' ಇದು ರಾಜಬಾಳ್ವ ಭಾರತದ ನಿಜವಾದ ಬಾಳು' ಎಂಬುದು ಸುರಸುಂದರ ಧ್ವನಿಯೊಂದು ಅವನ ಹೃದಯ ಗರ್ಭದಿಂದುದಿಸಿ ಮನದ ಸಿಂಹಾಸನದಲ್ಲಿ ಪ್ರತಿಧ್ವನಿ ಗೊಡುತ್ತಲಿದೆ.

' ಹೌದು ಇಲ್ಲಿಯೂ ಬೆಳಕಿದೆ ... ಆದರೆ ಅದು ಕೃತಕವಲ್ಲ; ಕಠೋರ ವಲ್ಲ; ಶಾಂತವಾಗಿದೆ; ... ಸ್ವಾಭಾವಿಕವಾಗಿದೆ.... '

ರಾಘುವಿನ ಮನಸ್ಸು ಯಾವದೋ ಒಂದು ಅಂತಿಮ ನಿರ್ಧಾರಕ್ಕೆ ಬಂದು ನುಡಿಯುತ್ತಲಿದೆ ಆ ನುಡಿಯಿಂದ ಎಚ್ಚತ್ತ ಅವನು ತಾನಿರುವ ತಾಣವನ್ನೇ ಮರೆತುಬಿಟ್ಟ.

' ಮನೀಗೆ ಹೋಗೂಣೇಳೋ ಮಾರಾಯಾ. ಹಂಗ್ಯಾ ಕೂತೆಲ್ಲ– ಆ ಗುಡ್ಯಾಗಿನ ರಾಮಲಿಂಗನ್ಹಂಗ! '

ಎಂದು ನಗೆಯಾಡುತ್ತ ರಾಮು ಅವನನ್ನೆಚ್ಚರಿಸಿದಾಗಲೆ ರಾಘುವಿಗೆ ಈ ಪ್ರಪಂಚದ ಅರಿವಾದುದು. ಕಣ್ಣುಬಿಟ್ಟು ನೋಡಿದ ರಾಘು.

ನೆರೆದ ಪರಿಸೆ ಕರಗಿತ್ತು. ಕರಡಿ ಮಜಲು ತಿರುಗಿತ್ತು. ಆದರೂ ಗಾಳಿಯಲ್ಲಿ ತೇಲಿಕೊಂತು ರಾಘುವಿನ ಕಿವಿಗೆ ಇನ್ನೂ ಕೇಳಿಸುತ್ತಲೇ– ಇತ್ತು; ಎಂದೆಂದೂ ಮರೆಯಲಾರದಂತೆ ಕೇಳಿಸುತ್ತಿತು.

೫

ಹತ್ತಾತ್ತನೆ ರಾಘು ಮಲಗಿದಲ್ಲಿಂದ ಎದ್ದು ಕುಳಿತ. ಪಕ್ಕದಲ್ಲಿಯೇ ಇದ್ದ ಸಣ್ಣಗೆ ಉರಿಯುತ್ತಿರುವ ಲಾಂದ್ರವನ್ನು ದೊಡ್ಡದು ಮಾಡಿದ. ಹಾಗೆಯೆ ಒಂದೈದು ನಿಮಿಷ ತಲೆದಿಂಬನ್ನು ಗೋಡಗೆ ಒರಗಿಸಿ ಕುಳಿತ.

ನಿಜವಾಗಿಯೂ ಅವನಿಗೆ ನಿದ್ರೆ ಆವರಿಸಲಿಲ್ಲ. ಆವರಿಸುವದಾದರೂ ಹೇಗೆ? ನಡೆದ ಘಟನೆಗಳನ್ನೆಲ್ಲ ಅವನ ಮನಸ್ಸು ತೂಗಿ ನೋಡುತ್ತಿತ್ತು. ಹಳ್ಳಿಯಲ್ಲಿ ಕಂಡ ಒಂದೊಂದು ದೃಶ್ಯವೂ ಅವನ ಸ್ಮೃತಿ ಪಟಲದ ಮೇಲೆ ಮಿಂಚಿ ಅವನಿಗೆ ಹೊಸ ಬೆಳಕನ್ನು ನೀಡುತ್ತಿತ್ತು. ಹೊಸ ಅಭಿಪ್ರಾಯವನ್ನು ಅವನಲ್ಲಿ ಹುಟ್ಟಿಸುತ್ತಲಿತ್ತು. ಹಳ್ಳಿಯ ಬದುಕನ್ನೇ ಕಂಡರಿಯದೆ, ಹಳ್ಳಿಯ ಸಂಸ್ಕೃತಿಯನ್ನು ತಿಳಿದುಕೊಳ್ಳದೆ ಬರಿಯ ನಗರದ ಬಾಹ್ಯ ಬೆಳಕೇ ಆತ್ಮ ಬೆಳಕೆಂದು ನಂಬಿದ್ದ ಅವನ ನಂಬಿಕೆ ಇಂದು ತಲೆ ಕೆಳಗಾಗಿತ್ತು. ನಾಣ್ಯದ ಒಂದೇ ಮುಖವನ್ನು ಕಂಡು ಅದೇ ಸತ್ಯ– ಅದೇ ಸುಂದರ ಎಂದು ಬಗೆದಿದ್ದ ಅವನು ಇನ್ನೊಂದು ಮುಖವನ್ನೂ ಕಂಡು ತನ್ನ ಭಾವನೆಗಳನ್ನು ಬದಲಿಸಿ ಕೊಳ್ಳಬೇಕಾಯಿತು. ತಾತ್ಸಾರಕ್ಕೆ ಪ್ರತಿಯಾಗಿ ಪ್ರೀತಿ, ಪ್ರೀತಿಯೊಂದಿಗೇ ಅಭಿಮಾನ ಅವನಲ್ಲಿ ಮೂಡಿದವು. ಆ ಅಭಿಮಾನದಲ್ಲಿಯೇ ಅವನು ಹೇಳಿಕೊಂಡ.

'ಹಳ್ಳಿಯ ಸಂಸ್ಕೃತಿಯಲ್ಲಿ, ಆಚಾರದಲ್ಲಿ, ನಡೆಯಲ್ಲಿ, ನುಡಿಯಲ್ಲಿ ಸಾಂಪ್ರದಾಯವಿದೆ ನಿಜ.... ಅಂದಾಕ್ಷಣಕ್ಕೆ ಅದನ್ನು ಹೀಯಾಳಿಸಬೇಕೆ?.... ಸತ್ವವಿಲ್ಲ ಎನ್ನಬೇಕೆ?.... ಸಾಮೂಹಿಕ ಬದುಕು, ಬಾಳು ಎಷ್ಟು ಸುಂದರ ವಾಗಿದೆ.... ಅವರ ಆ ಜೀವನದಲ್ಲಿ ಹೊಮ್ಮುವ ಅಂತಃಕರುಣ ಪೂರಿತ ಪ್ರೇಮ, ಸುಖ, ಸಂತೋಷ ಎಂತಹದು!....

'ಇದೋದನ್ನು ತಿಳಿಯಲಾರದ ನಾನು ಕುರುಡನಾಗಿದ್ದೆ. ಆ ಕುರುಡು ತನದಲ್ಲಿಯೆ ಹಳ್ಳಿಯನ್ನೇ ಹಿಯಾಳಿಸಿದೆ.... ಹಳ್ಳಿಯ ಜನ, ಹಳ್ಳಿಯ ಜೀವನ ವನ್ನು ಕಂಡು ಅಣಕವಾಡಿದೆ....

'ಲೀಲೆಯನ್ನೂ ನಾನು ಅದೇ ಮನೋಭಾವನೆಯಿಂದ ನೋಯಿಸಿದೆ. ಎಷ್ಟೋ ರೀತಿಯಿಂದ ಕಾಡಿದೆ.... ಅವಳ ಪ್ರತಿಯೊಂದು ಮಾತು, ನಡೆಗಳನ್ನು 'ಹಳ್ಳಿಯ ಹುಡುಗಿ' ಎಂಬ ತಿರಸ್ಕಾರದ ದೃಷ್ಟಿಯಿಂದ ನೋಡಿದೆ........ ವಿಡಂಬಿಸಿದೆ.... ಅವಳ ಪೂಜೆ–ಪುನಸ್ಕಾರಗಳನ್ನು ಕಂಡು ನಕ್ಕೆ....

'ಓ ಸಾಂಪ್ರದಾಯ ತಿದ್ದಬಹುದು.... ಮನಸ್ಸನ್ನು ತಿದ್ದಲು ಸಾಧ್ಯವೆ?'

'ಮನಸ್ಸು ತಿದ್ದುವ ಕಷ್ಟ ನನಗಿಲ್ಲ ... ಮನಸ್ಸು ಡೊಂಕಾಗಿಲ್ಲ.... '

'ಹೆಣ್ಣು ಹಳ್ಳಿಯಲ್ಲಿ ಪೂಜ್ಯಸ್ತ್ರೀಯು.... ಅವಳಿಗಿರುವ ನಿಜವಾದ ಗೌರವ ಮತ್ತಾರಿಗೂ ಇಲ್ಲ.... ಅವಳಿಗೆ ಸ್ವಾತಂತ್ರ್ಯದ ಅರ್ಥ ಚೆನ್ನಾಗಿ ಗೊತ್ತಿದೆ.... ಆದರೆ ಅದರ ದುರುಪಯೋಗವನ್ನು ಅವಳಿಂದೂ ಮಾಡಿಲ್ಲ; ಮಾಡುವಂತಿಲ್ಲ ... ಸ್ವಾತಂತ್ರ್ಯದ ಹೆಸರಿನಲ್ಲಿ ಅತ್ಯಾಚಾರ, ಅನಾಚಾರ ನಡೆಯುವದಿಲ್ಲ.

· 'ಇಂತಹ ಒಳ್ಳೆಯ ಪತ್ನಿಯನ್ನೂ ನಾನು ಬಾಳಿಸಲಾರದೆ ಹೋದೆನಲ್ಲ ಅರಿಯದೆಯೆ ಅರಿತಂತೆ ನಟಿಸಿದೆ ... ತಿಳಿಯದೆಯೆ ತಿಳಿದಂತೆ ಹೇಳಿದೆ.... '

'ಹೌದು.... ಇನ್ನು ಮುಂದೂ ನನ್ನ ಎಚ್ಚತ್ತ ಮನಸ್ಸು ಲೀಲೆಯನ್ನು ಚೆನ್ನಾದ ರೀತಿಯಲ್ಲಿ ಬಾಳಿಸಲು ಆಜ್ಞಾಪಿಸುತ್ತದೆ ... ಸಾಂಪ್ರದಾಯ ತಿದ್ದಿ ಕಲಿತವನ ಕರ್ತವ್ಯ ನೆರವೇರಿಸಲು ನುಡಿಯುತ್ತಿದೆ ...

'ನನ್ನ ಬಾಳಿನ ನಿಜವಾದ ಯುಗ ಆರಂಭವಾಗುವದು ಇಂದಿನಿಂದ. ಪರಸ್ಪರರು ನಮ್ಮ, ನಮ್ಮ ಹೃದಯಗಳನ್ನರಿತು ಬಾಳಿನ ಕರ್ತವ್ಯವನ್ನು ನೆರವೇರಿಸಲು, ಬದುಕಿನ ನಿಜವಾದ ನೆಲೆಯನ್ನರಿತುಕೊಳ್ಳಲು ಈ ಮಹಾ ದಿನದಂದು ದೀಕ್ಷಾಬದ್ಧರಾಗುತ್ತೇವೆ....'

'ನಿಜವಾಗಿಯೂ ಇಂದು ತಾನೆ ನಮ್ಮ ಬಾಳು ಆರಂಭವಾಯಿತು....'

ಪ್ರಶಾಂತವಾದ ಪರುಷದಿಂದೊದಗಿದ ಜ್ಯೋತಿಯೊಂದು ರಾಘ್ವಿನ ಮೊಗದ ಮೇಲೆ ಅವನ ಹೃದಯದ ನಿರ್ಣಯದಿಂದ ಹೊರಹೊಮ್ಮುತ್ತಿತ್ತು. ರಾತ್ರಿ ಎಲ್ಲ ಕಣ್ಣು ಕಾಣಿಸದೆ ಅತ್ತ-ಇತ್ತ ಬೀಳುತ್ತ-ಏಳುತ್ತ ಅಲೆದು ಬೆಳಗಾದೊಡನೆಯೆ ತಪ್ಪಿಸಿಕೊಂಡ ತನ್ನ ತಾಣ ಸೇರಿದ ಕಪಿಯಂತೆ ಅವನ ಮನಸ್ಸೂ ಇಂದು ಸಂತೋಷಪಟ್ಟಿತ್ತು. ಸಂಭ್ರಮದಿಂದ ಕೇಕೆ ಹಾಕಿ ನಕ್ಕಿತು. ಆ ಅಮಿತವಾದ ಆನಂದದಲ್ಲ, ತುಂಬಿ ಬಂದು ಆಡುತ್ತಲಿದ್ದ ಮನದ ಉಯ್ಯಾಲೆಯ ಆಟದಲ್ಲಿ ರಾಘು ತನ್ನನ್ನೇ ತಾನು ಮರೆತ್ತು ಮಲಗಿ ನಿದ್ರಿಸುತಲಿದ್ದ ಲೀಲಳ ಅಮೃತ ಹಸ್ತಗಳನ್ನು ತನ್ನ ಕೈಯಲ್ಲಿ ಒತ್ತಿ ಹಿಡಿದ. ಇಂದು ಎಂತಹ ಅಮರ ಸ್ಪರ್ಶವಾಗಿ ತೋರಿತು ಅವನಿಗೆ ಆ ಸ್ಪರ್ಶ!

ಹಠಾತ್ತನೆ ಕಣ್ಣು ಬಿಟ್ಟಳು ಲೀಲ. ಪತಿಯನ್ನೊಂದು ಸಲ ನೋಡಿದಳು. ಇಂದು ಎಂದಿಲ್ಲದ ಬೆಳಕು ಅವನ ಮೊಗದಲ್ಲಿ ಬೆಳಗುತ್ತಿದೆ. ಅವನ ಆ ಕಣ್ಣುಗಳಲ್ಲಿ ಅಪೂರ್ವ ಶಾಂತಿ ಕುಣಿಯುತ್ತಿದೆ.

ಇಂತಹ ಮಧ್ಯರಾತ್ರಿಯಲ್ಲಿ ಇಷ್ಟು ಹೊತ್ತು ಕುಳಿತಿದ್ದಾರಲ್ಲ;– ನಿದ್ರೆಗೆಟ್ಟು ಎಂದು ಅವಳಿಗೆ ನೋವೆನ್ನಿಸಿತು. ಮಲಗಲು ಹೇಳಬೇಕೆಂದು ಯೋಚಿಸಿದಳು. ಆದರೆ 'ಅವರ' ಸುಖವಾದ ಕರಸ್ಪರ್ಶ, ತನ್ನನ್ನೇ ರೆಪ್ಪೆ ಮಿಟುಕಿಸದೆ ನೋಡುತ್ತ ಕುಳಿತ ಆ ಭಂಗಿ ಅವಳಿಗೆ ನಗು ತರಿಸಿತು. ಸ್ವಲ್ಪ ಮೋಜು ಮಾಡಬೇಕೆಂದು ಅವಳು ಗಟ್ಟಿಯಾಗಿ ಕಣ್ಣು ಮುಚ್ಚಿದಳು. ಮನಸ್ಸು ನಗುತ್ತಲಿತ್ತು.

'ಲೀಲಾ....'

'........'

'ಏ, ಒಂದ ಸೊಲ್ಪ ಏಳಲ್ಲ....'

ನಿದ್ರೆ ಹತ್ತಿ ಮಲಗಿದವರನ್ನೆಚ್ಚರಿಸಬಹುದು. ನಿದ್ರೆಯ ಸೋಗು ಹಾಕಿಕೊಂಡು ಮಲಗಿರುವವರನ್ನೆಚ್ಚರಿಸಲು ಸಾಧ್ಯವೆ ?

'ಲೀಲಾ....ಲೀಲೀ....ಏಳ ...'

ಪತಿಯ ಕಾತರದ ಸ್ವರವನ್ನು ಕೇಳಿ, ಅವನು ಇಂದು ಎಚ್ಚರಿಸುತ್ತಿರುವ ಹೊಸ ಬಗೆಯ ರೀತಿಯನ್ನು ಕಂಡು ಅವಳಿಗೆ ನಗು ಬಂದುಬಿಡಬೇಕೆ? ನಗೆ ತಡೆಯಲಾರದೆ ಗಟ್ಟಿಯಾಗಿ ನಕ್ಕುಬಿಟ್ಟಳು.

'ಏ ಕಳ್ಳಿ....'

ಗಟ್ಟಿಯಾಗಿ ಅವಳನ್ನಲುಗಾಡಿಸಿ ಅವಳ ತುಂಬಿದ ತೋಳುಗಳನ್ನು ಹಿಡಿದು ಮೇಲಕ್ಕೆತ್ತಿ ಕುಳ್ಳಿರಿಸಿದ ರಾಘು.

'ನಿನಗೇನು ನಿದ್ದಿಲ್ಲ–ನೀರಡಿಕಿಲ್ಲ. ಹಂಗ ನನಗೂ ಅಂತ ತಿಳಕೊಂಡ್ರೇನು?'

'ನೀ ಯಾವಾಗಲೂ ಎಚ್ಚರದಿಂದಿರತಿ ಲೀಲಾ. ನಾ ಈಗ ಎಚ್ಚರಾದೆ....'

'ಅಂದ್ರ!....ನಾ ನಿದ್ದೀನ್ಯಾ ಎಂದೂ ಮಾಡಿಲ್ಲ ಅಂತೀರೇನು?'

ಲೀಲೆ ಅಚ್ಚರಿಯಿಂದ ಕೇಳಿ ಪತಿಯ ಮೊಗ ನಿರುಕಿಸಿದಳು. ಅವನ ಒರಟು ತುಟಿಗಳಲ್ಲಿ ಮೃದುವಾದ ನಗೆ ಮಿಂಚಿತು. ಅದು ಎಂದಿನಂತೆ ಕಟುವಾಗಿರಲಿಲ್ಲ. ಅಣು ವ್ಯಂಗ್ಯತೆಯುರಲಿಲ್ಲ.

'ಇವತ್ತ ಖರೇನನ್ನ ಮನಸು ಎಚ್ಚರಾಗೇದ ಲೀಲ–ಇಷ್ಟ ದಿವಸ ನಿದ್ದೀ ಮಾಡಿ ಆ ನಿದ್ದೀವಳಗ ನಾ ನಿನಗ ಬೈದ್ಹಂಗ ಬಡಬಡಿಸಿದೆ. ಸಿಟ್ಟ ಬಂದವ ರ್ಹಂಗ ಬೈದೆ. ಇವತ್ತ ಎಚ್ಚತ್ತ ಕೂಡ್ಲೆ ನಾ ಬಡಬಡಿಸಿದ್ದೆಲ್ಲ ನೆನಪಾತು. ಅದನ ನೀ ಮನಸಿಗೆ ಹಚಗೋಬ್ಯಾಡ ಲೀಲಾ. ನನ್ನ ಕ್ಷಮಿಸು.'

ಕರುಣೆಯೆ ಮೈವೆತ್ತು ಬಂದಂತೆ ಉಸುರುತ್ತಿದ್ದ ರಾಘು. ಲೀಲೆಗೆ ಅವನ ನುಡಿಗಳನ್ನೇ ನಂಬುವದಕ್ಕಾಗಲಿಲ್ಲ. ಅವಳ ಕಣ್ಣಲ್ಲಿ ಪತಿಯ ನಿಜವಾದ ಅಂತಃಕರಣ ಪೂರಿತವಾದ ಹೃದಯವನ್ನು ತಿಳಿದು ನೀರೂರಿತ್ತು. ಏನೋ ಹೇಳಬೇಕೆಂದರೂ ಅವಳ ಮನಸ್ಸು ಮೂಕಾಗಿತ್ತು. ನುಡಿಯದ ನುಡಿಯಾಗಿತ್ತು ಅವಳ ನುಡಿ.

ಪತ್ನಿ ಮಾತನಾಡದೆ ಕಣ್ತುಂಬ ನೀರು ತಂದುದನ್ನು ತಿಳಿದ ರಾಘು ಮೆಲ್ಲನೆ ಅವಳ ಕಂಬನಿಗಳನ್ನೊರೆಸಿದ. ಹಾಗೆಯೆ ಅವಳ ಮೃದುವಾದ ಹಸ್ತಗಳನ್ನು ತನ್ನ ಕೈಯಲ್ಲಿ ಮುಚ್ಚಿ ಹಿಡಿದು ಅವಳನ್ನೇ ದೈನ್ಯದಿಂದ ನೋಡುತ್ತ ಕೇಳಿದ ಹೃದಯ ತುಂಬಿ.

'ನಾ ನಿನ್ನ ಕೈಹಿಡಿದವ್ಯಾಲೆ ಇಂದಿನ ತನಕಾ ಏನಾರ ಬಾಯಿತಪ್ಪಿ ಆಡಿದ್ದನ್ನ ಮನಸ್ಸಿನಲ್ಲಿ ಹಿಡೀಬ್ಯಾಡ ಲೀಲಾ. ಅದು ಕುಡದವ ಮಾತಾಡಿದ ಮಾತಿದ್ಹಂಗ; ಕನಸಿನ್ಯಾಗ ಕನವರಿಸಿದ್ಹಂಗ. ಕ್ಷಮಿಸಿದ್ಯಾ ಲೀಲಾ ?'

ಅವನ ಕರುಣಾಪೂರಿತವಾದ ಧ್ವನಿಗೆ ಲೀಲೆ ಕರಗಿ ಹೋಗಿದ್ದಳು. ಅವಳ ಕಣ್ಣಲ್ಲಿ ಇನ್ನು ನಾಲ್ಕು ಕಂಬನಿಗಳು ಹೆಚ್ಚು ಉಳಿದವು.

'ನೀವ ನನ್ ದೇವ್ರು. ದೇವ್ರನ ಕ್ಷಮಿಸಲಿಕ್ಕೆ ಮನಸ್ಯಾಗೇನ ಧಿಕಾರ?'

'ನಿನಗಧಿಕಾರ ಅದ ಲೀಲಾ. ಕೈಹಿಡಿದ ಹೆಂಡತಿ. ನನ್ನ ಬಾಳಿನ ಬಾಗು ದೇವತೆ.... ಕಮಿಸು....'

ಮೆಲ್ಲನೆ ಅವನಿಂದ ಕೈಬಿಡಿಸಿಕೊಂಡು ಲೀಲಾ ಅವನ ಬಾಯಿಯ ಮೇಲೆ ಕೈಯಿಟ್ಟು ಹೇಳಿದಳು.

'ನೀವ ಹಿಂಗ ಮಾತನಾಡಬಾರ್‍ದು ನನ್ನ ದೇವರೇ.'

'ಅಳತೀಯಾಕ ಲೀಲಾ....ನಗು....ನಾನೂ ನಗತೀನಿ.... ನಗು ಲೀಲಾ....'

ಲೀಲಳ ಮೊಗವನ್ನು ತನ್ನೆಡೆಗೆ ಹೊರಳಿಸಿಕೊಂಡು ಆ ಕಂಬನಿಗಳ ನ್ನೊರೆಯಿಸಿ ತುಂಬಿದ ಸುಂದರವಾದ ಕಪೋಲಗಳನ್ನು ನೇವರಿಸಿದ. ಅವನ ತುಟಿಗಳಲ್ಲಿ ನಗೆ ಮೂಡಿತು. ಲೀಲಳ ತುಟಿಗಳಲ್ಲೂ ಮಲ್ಲಿಗೆಯಂತಹ ನಗೆ ಅರಳಿತು. ಆ ಮಲ್ಲಿಗೆಯನ್ನು ಹಿಡಿದುಕೊಳ್ಳಲು ರಾಘು ತನ್ನ ತುಟಿಗಳನ್ನು ಮುಂದೆ ಚಾಚಿದ.

ಚಾಚಿದ ಆ ತುಟಿಗಳಲ್ಲಿ ಮಲ್ಲಿಗೆ ಸಿಕ್ಕಿತ್ತು.

ಅಂತಹುದೆ ಪ್ರಯತ್ನದಿಂದ ಮತ್ತೆ ಹಿಂದೆ ಸರಿದಳು ಸೀತಾ. ಪತಿಯ ತುಟಿಗಳ ಹತ್ತಿರ ತನ್ನ ತುಟಿ ಒಯ್ದು ಮತ್ತೆ ಹಿಂದೆ ಸರಿದಳು. ಅವಳ ಎದೆ ಒಂದೇ ಸಮನೆ ಹೊಡೆದುಕೊಳ್ಳುತ್ತಿತ್ತು. ಅವಳ ಅಂತಃಕರುಣ ಹೊಯ್ದಾ ಡುತ್ತಲಿತ್ತು. ಇಂದು ತಾನು ಪತಿಗೆ ಮಾಡಿದ ಕೃತ್ಯ, ಆಡಿದ ನುಡಿಗಳೆಲ್ಲ ಭೂತಾಕಾರ ತಾಳಿ ಅವಳೆದುರು ನರ್ತಿಸುತ್ತಲಿದ್ದವು. ಸರಿಯಾದ ದೃಷ್ಟಿ ಕೋನದಿಂದ ಒಂದು ದಿನವೂ ಅವರನ್ನು ಕಾಣಲಿಲ್ಲವಲ್ಲ ಎಂದು ಪಶ್ಚಾತ್ತಾ ಪವಾಯಿತು. ಅವಳು ಈ ಇಪ್ಪತ್ತೂ ದಿನ ಕಳೆಯುವಲ್ಲಿ ಹಳ್ಳಿಗರ ಬದುಕನ್ನು ಕಣ್ತೆರೆದು ನೋಡಿ ಅರ್ಥ ಮಾಡಿಕೊಂಡಿದ್ದಳು. ಅವರ ಬದುಕು, ಸುಖ– ದುಃಖ, ಅವರ ಇರುವಿಕೆ ಒಡೆಯಲಾರದ ಒಗಟಾಗಿ ತೋರಲಿಲ್ಲ ಅವಳಿಗೆ. ಹೊಸ ಚೈತನ್ಯ ಹೊಸ ಹುಮ್ಮಸನ್ನು ಅವಳಿಗೆ ನೀಡಿದ್ದವು. ಕಂಡರಿಯದ ಆ ಒಂದೊಂದು ದೃಶ್ಯವೂ ಅವಳ ಹಿಂದಿನ ಮನೋಭಾವನೆಯನ್ನು ತಲೆಕೆಳಗೆ ಮಾಡಿ ಹೊಸ ಬೆಳಕನ್ನು, ಹೊಸ ಆಸೆಯನ್ನು ಬಿತ್ತರಿಸಿತ್ತು. ಯಾವದು ತನಗೆ ಅಸಾಧ್ಯವೆಂದು, ಅಸಹ್ಯವೆಂದು ಅವಳು ಭಾವಿಸಿದ್ದಳೊ ಅದೇ ಇಂದು ಸಹ್ಯವಾಗಿತ್ತು; ಸಾಧ್ಯವಾಗಿತ್ತು.

ಹಳೆಯ ಪರದೆಯನ್ನು ಹರಿದು ಬಿಸುಟದ ಮಹಾದಿನ-ಇಂದು ಅವಳಿಗೆ. ಹಳೆಯ ಕೊಳೆಯನ್ನು ಕಳೆದ ಅಮರ ದಿನ-ಇಂದು ಅವಳಿಗೆ. ಅಸಾಧ್ಯವಾದ ಮನಸ್ಸಿನ ಎಲ್ಲ ಭಾವನೆಗಳೂ ಪರಿವರ್ತನಗೊಂಡ ಮಂಗಲ ದಿನ ಇಂದು ಅವಳಿಗೆ.

ಇಂತಹ ಸುಂದರ ದಿನ ತನ್ನ ಬಾಳಿನಲ್ಲಿ ಕಾಣಬಹುದೆಂದು ಅವಳೆಣಿಸಿರಲಿಲ್ಲ. ಅದಕ್ಕೆ ಪ್ರತಿಯಾಗಿ ಬಾಳೇ ಒಡೆದು ಛಿದ್ರಛಿದ್ರವಾಗಿ ಹೋದೀತೆಂದು ನೆನೆದವಳು ಅವಳು.

ತನ್ನ ಮನಸ್ಸಿಗಾಗಿಯೇ ಅವಳಿಗೆ ನಗು ಬಂತು. ಹಳ್ಳಿಯ ಬದುಕನ್ನು ಬಣ್ಣವನ್ನು ಕಾಣದೆ ಆರೋಪಿಸಿದ್ದ ತಾನು ಸದ್ಯಅದೇ ವಾಸಿ ಎಂದು ಹೇಳುವ ಸ್ಥಿತಿಗೆ ಬಂದ ತಾನು. ಇಬ್ಬರೂ ತಾನೆಯೆ! ಆದರೆ ಇಬ್ಬರಿಗೂ ಎಷ್ಟು ಅಂತರ ಎನ್ನಿಸಿತು.

'ಸ್ವಾತಂತ್ರ್ಯ ಹೆಣ್ಣಿಗೆ ಹಳ್ಳಿಯಲಿಲ್ಲ' ಎಂದು ಅವಳು ಬಡಾಯಿ ಕೊಚ್ಚುತ್ತಿದ್ದಳು. ಕೃತಕತೆಯೇ ಸ್ವಾತಂತ್ರ್ಯ, ವೇಷ-ಭೂಷಣ, ಪಾರ್ಕಿಗೆ ಅಲೆಯುವದೇ ಸ್ವಾತಂತ್ರ್ಯ ಎಂದು ತಿಳಿದಿದ್ದ ಅವಳಿಗೆ ಸಂಜೆಯ ಉತ್ಸವ ಸ್ವಾತಂತ್ರ್ಯದ ಅರ್ಥವನ್ನು ಕಲಿಸಿತು. ಆ ಆರತಿ ಬೆಳಗುವ ಸುಂದರ ದೃಶ್ಯ ಮತ್ತೆ ಮತ್ತೆ ಅವಳ ಹೃದಯ ಪಟಲದ ಮೇಲೆ ಮೂಡುತ್ತಿತ್ತು. ಸ್ವಾತಂತ್ರ್ಯದಿಂದ, ಹೆಮ್ಮೆಯಿಂದ ನಗುನಗುತ್ತ ನಿಂತಿರುವ ಆ ಗರತಿಯರ ಬೆಳ್ಮೊಗಗಳು ಕೈಯಲ್ಲಿ ಹಿಡಿದ 'ತಾಬಂಡಿ'ಯ ನೀಲಾಂಜನದ ಬೆಳಕಿನಲ್ಲಿ ಬೆಳಗಿ 'ಇದು ನಿಜವಾದ ಸ್ವಾತಂತ್ರ್ಯ' ಎಂದು ಸಾರುತ್ತಿದ್ದವು.

'ಅವರು ನನಗೆ ಇಂತಹ ಸ್ವಾತಂತ್ರ್ಯವನ್ನು ಎಂದೋ ದಯಪಾಲಿಸಿದ್ದಾರೆ' ಅವಳ ಹೃದಯ ನುಡಿಯಿತು. ಆ ನುಡಿಗೆ ಸರಿಯಾಗಿ ಅವಳ ಕಣ್ಣು ಇನ್ನೊಂದು ಸಲ ಮಲಗಿ ನಿದ್ರಿಸುತ್ತಿದ್ದ ಅವರ ಮೇಲೆ ದೃಷ್ಟಿ ಹರಿಯಿಸಿತು

ದಿಂಬಿನ ಮೇಲೆ ತಲೆಯಿಟ್ಟು ರಾಮು ಸುಖವಾಗಿ ಗೊರಕೆ ಹೊಡೆಯುತ್ತಲಿದ್ದ. ಶಾಂತ, ಪ್ರಶಾಂತವಾದ ಆ ನಿದ್ರೆಯಂತೆಯೆ ಅವರೂ ಎಂತಹ ಸೌಮ್ಯ,.ಶಾಂತಮೂರ್ತಿ!....ವಿಷವನ್ನೆಲ್ಲ ಕಬಳಿಸಿಬಿಟ್ಟನೀಲಕಂಠನಂತೆ ನಗು ನಗುತ್ತಲೇ ನನ್ನ ಸೆಡವು, ಸಿಡುಕು, ಕಟುನುಡಿಗಳನ್ನೆಲ್ಲ ಕುಡಿದೂ ಶಾಂತವಾಗಿದ್ದಾರೆ!....'

ಅವರ ನಿದ್ರೆಯನ್ನು ಕಂಡೊಡನೆಯೆ ಸೀತಳ ಮನಸ್ಸು ಮಾರ್‍ನುಡಿಯಿತು. ಹಾಗೆಯೆ ಅವಳ ದೃಷ್ಟಿ ಮುಂದುವರಿದು ಪತಿಯ ಮೊಗದ ಮೇಲೆಯೇ ನೆಲೆನಿಂತಿತು.

ಅದೇ ಸ್ನೇಹ, ಪ್ರೀತಿ, ಅಂತಃಕರುಣಗಳ ಪ್ರತಿರೂಪವಾಗಿ ರಾಮುವಿನ ಮೊಗದಲ್ಲಿ ಮಿಂಚುತ್ತಲಿದೆ ನಗೆ! ಅವಳ ಎಲ್ಲ ತೊಂದರೆಗಳನ್ನೂ ಸಹಿಸಿಕೊಂಡು ಅವಳು ಹಾಡಿದ ಎಲ್ಲ ಅಣಕವಾಡಗಳನ್ನೂ ಅರಗಿಸಿಕೊಂಡು ಹೊಳೆಯುತ್ತಿದೆ ಆ ನಗೆ!! ಬೆಳಗು ಜಾವದ ತಂಗಾಳಿಗೆ ಹಾರಾಡುತ್ತಿರುವ ಅಸ್ತವ್ಯಸ್ತವಾದ ಆ ಕ್ರಾಫಿನ ಕಪ್ಪಾದ ಕೂದಲುಗಳನ್ನು ಕಂಡಂತೂ ಅವಳ ಅಂತಃಕರುಣ ಉಕ್ಕಿಬಂತು. ಪ್ರೀತಿ ತುಂಬಿಬಂತು. ಸ್ನೇಹ ಉದಿಸಿತು.

ಮುಟ್ಟಲೊ, ಬೇಡವೊ ಎಂದು ಅನುಮಾನಿಸುತ್ತ ತನ್ನ ಅಮೃತ ಹಸ್ತಗಳನ್ನು ಅವನ ವಿಶಾಲವಾದ ಹಣೆಯ ಮೇಲಿಟ್ಟಳು. ಅವನ ಕ್ರಾಫಿನ ಕೂದಲುಗಳನ್ನು ನೇವರಿಸಿದಳು.

ಹಠಾತ್ತನೆ ಎಚ್ಚರಗೊಂಡ ರಾಮು. ಪ್ರತಿದಿನವೂ ಎಚ್ಚರಾಗುವ ವೇಳೆ ಅದು. ಆಗ ಎಚ್ಚತ್ತ ಅವನು ಹೊಲಕ್ಕೆ ಹೋಗುತ್ತಿದ್ದ. ಹೊಲದಲ್ಲಿ ಕೆಲಸವಿಲ್ಲದಿದ್ದರೆ ಎರಡು ಮೂರು ಮೈಲು ಅಲೆದಾಡಿಕೊಂಡು ಬರುತ್ತಿದ್ದ. ಅದವನ ನಿತ್ಯದ ಪರಿಪಾಠ. ಆದರೆ ಸೀತೆ ಹಳ್ಳಿಗೆ ಬಂದ ಒಂದು ದಿನವೂ ಇಷ್ಟು ಬೇಗನೆ ಎದ್ದಿಲ್ಲ. ಒಂದೆರಡು ಸಲ ನಿದ್ದೆಗಣ್ಣಿನಲ್ಲಿಯೇ ಅವನು ಹೋಗುವದನ್ನು ನೋಡಿದ್ದಾಳೆ. ಇನ್ನು ಮುಂದೆ ಅವನು ಹಾಗೆ ಎದ್ದು ಹೊರಡುವಾಗ ತಾನೂ ಜತೆಗೇ ಎದ್ದು ಅವನಿಗೆ ಚಹ ಮಾಡಿಕೊಡಬೇಕು— ಎಂದು ಅವಳೀಗ ಮನದಲ್ಲಿಯೇ ನಿಶ್ಚಯಿಸಿಕೊಂಡಳು.

ರಾಮು ಹಾಸಿಗೆ ಬಿಟ್ಟೆದ್ದು ಕುಳಿತ. ಉರಿಯುತ್ತಿರುವ ದೀಪ, ನಿದ್ರೆ ಮಾಡದೆ ಕುಳಿತ ಸೀತೆ! ಅವನಿಗೆ ಯಾವದೂ ಅರ್ಥವಾಗಲಿಲ್ಲ 'ಇಂದೇಕೆ ಹೀಗೆ?' ಎಂದು ಎಷ್ಟು ಯೋಚಿಸಿದರೂ ಬಗೆಹರಿಯುಲಿಲ್ಲ. ಅವನು ಅಚ್ಚರಿಯಿಂದ ಕೇಳಿದ.

'ನೀ ಇನ್ನುಃ ಎದ್ದ ಕೂತೀಯಲ್ಲಃ ನಿದ್ದೀನಃ ಮಾಡಿಲ್ಲೇನುಃ ?'

ಸೀತೆ ಪ್ರತಿಯಾಗಿ ಏನನ್ನೂ ಹೇಳಲಿಲ್ಲ. ಕತ್ತು ತುಂಬಿ ಬಂದಿತ್ತು. ಮೆಲ್ಲನೆ ಅವನ ಪಾದಗಳಿಗೆ ಹಣೆ ಹಚ್ಚಿದಳು. ತನ್ನ ಕಂಬನಿಯಲ್ಲಿ ಅವನ ಪಾದ ತೊಳೆದಳು.

'ಹಿಂಗ್ಯಾಕ ಸೀತಾಽ?'

'ನನ್ನ ಕ್ಷಮೀಸೀನಿ ಅಂತ್ಹೇಳ್ರಿ....ಅಂದ್ರ ಹೇಳ್ತೀನಿ....'

ರಾಮುವಿಗೆ ಯಾವದೂ ಹೊಳೆಯಲಿಲ್ಲ. ಯಾವದೂ ತಿಳಿಯಲಿಲ್ಲ.

'ನೀ ಅಂಥಾ ತಪ್ಪೇನ ಮಾಡೀದಿ ಸೀತಾ?'

'ಕ್ಷಮೀಸೀನಿ ಅನ್ರಿ....ಅಲ್ಲಿಂದ ಹೇಳ್ತೀನಿ.'

ನಿನ್ನ ಕ್ಷಮಿಸದ ಮತ್ಯಾರ್ನ ಕ್ಷಮಿಸೂದು ಸೀತಾ?....ಹೇಳುಇನ್ನಾರಽ'

ಸೀತೆ ತನ್ನ ಅಹಂಕಾರ, ಸಿಡಿನುಡಿ, ಹಳ್ಳಿಗರ–ಹಳ್ಳಿಯ ವಿಚಾರವಾಗಿ ತಾನು ಅಪಾರ್ಥ ಮಾಡಿಕೊಂಡು ಅವರಿಗೆ ಎದುರಾಡಿದ್ದು–ಎಲ್ಲವನ್ನೂ ಒಂದೊಂದಾಗಿ ಹೇಳಿದಳು. ಹಾಗೆಯೇ ಭಾರವಾದ ಕಂಠದಿಂದ ಹೇಳಿದಳು.

'ಹಿಂದಿನದ್ನ ಮರತಬಿಡ್ರಿ....ನನ್ನ ಎಲ್ಲಾ ತಪ್ಪೂ ಕ್ಷಮಿಸ್ರಿ....'

ರಾಮು ಮೃದುವಾಗಿ ನಕ್ಕು ಅವಳ ಮೊಗವನ್ನು ತನ್ನ ಕೈಯಲ್ಲಿ ಹಿಡಿದು ಮೇಲಕ್ಕೆತ್ತಿ ಆ ಕಪೋಲಗಳ ಮೇಲೆ ಇಳಿದು ಬಂದ ಕಂಬನಿಗಳನ್ನೊರಿಸಿದ. ಹಾಗೆಯೆ ಸಂತೈಸುವ ಸ್ವರದಲ್ಲಿ ಹೇಳಿದ.

'ಹುಚ್ಚಿ ಅಳತಾರೇನು ಅದಕೆಲ್ಲಽ? ಇಂಥಾವೆಲ್ಲ ಮನಸಿನ್ಯಾಗ ಹಿಡದ್ರ ಸಂಸಾರ ಹ್ಯಾಂಗ ನಡೀಬೇಕು ತಿಳೀಲಾರ್ದ ಮಾಡಿದ್ದು ತಪ್ಪಽ ಅಲ್ಲ. ಅಂದಮ್ಯಾಲೆ ನಿನ್ನ ತಪ್ಪು ಯಾವದೂ ಇಲ್ಲ....'

'ಎಂತಹ ಉದಾರ ಮನಸ್ಸು ಅವರದು!' ಎನ್ನಿಸಿತು ಸೀತಳಿಗೆ. ಇಂತಹ ಪತಿ ದೊರೆತದ್ದು ತನ್ನ ಪೂರ್ವಜನ್ಮದ ಪುಣ್ಯ ಎಂದುಕೊಂಡಿರಬೇಕು ಅವಳ ಮನಸ್ಸು.

ಕತ್ತುತಗ್ಗಿಸಿ ಕುಳಿತ ಸೀತಳನ್ನೆ ನೋಡುತ್ತಲಿದ್ದರಾಮುಮೆಲ್ಲನೆಹೇಳಿದ.

'ಸೀತಾಽಽ'

'ದೇವರ್‌ಽಽಽ'

'ನೀ ನನ್ನ ಭಾಗ್ಯ–ನನ್ನ ಸರ್ವಸ್ವ....'

ರಾಮು ಅವಳ ತೋಳುಗಳನ್ನು ತನ್ನ ತೋಳುಗಳಲ್ಲಿ ಬಂಧಿಸಿ ಅವಳ ಆ ತುಂಬಿದ ತುಟಿಗಳಿಗೆ ತನ್ನ ಅಧಿಕಾರ ಮುದ್ರೆಯನ್ನೊತ್ತಿದ. ಅವಳೆದೆ ಅವನೆದೆಗೆ ಒರಗಿತ್ತು. ಕಣ್ಣು ಕಣ್ಣಲ್ಲಿ, ಹೃದಯ ಹೃದಯದಲ್ಲಿ ನಟ್ಟುನಿಂತಿದ್ದವು.

ಬೆಳಕು ದಿಗ್ ದಿಗಂತವನ್ನೆಲ್ಲ ವ್ಯಾಪಿಸಿತ್ತು. ಸೃಷ್ಟಿ ಆ ಬೆಳಕಿನಲ್ಲಿ ಮಿಂದೇಳುತ್ತಲಿತ್ತು. ಆಗತಾನೆ ಎದ್ದು ತೀಡುತ್ತಿರುವ ಬೆಳಗಿನ ತಂಗಾಳಿಯಲ್ಲಿ ನಡುಗುತ್ತ ಉಡಸಾರಣೆ ಮಾಡುತ್ತಲಿದ್ದ ರಿಂದಕ್ಕ ಉದಯ

ರಾಗವನ್ನು ಮನೆಯಲ್ಲಿಯೇ ಹಾಡುತ್ತಿರುವಂತೆ ಮನೆಯ ಹಿಂದು, ಮುಂದಿನ ಕೈದೋಟ, ಅಂಗಳಗಳಲ್ಲಿ ಕುಳಿತ ಹಕ್ಕಿ-ಪಕ್ಕಿಗಳೂ ಬೆಳಗಿನ ಹಾಡು ಹಾಡುತ್ತಿದ್ದವು.

ಸುಪ್ರಭಾತ ಹೊಸ ಜೋತ್ಸ್ನೆಯಿಂದ ಹೊಳೆಯುತ್ತಿತ್ತು!

೬

ರಾಘು ಗೆಳೆಯನ ಜತೆಗೆ, ಹಳ್ಳಿಗರ ಜತೆಗೆ ಒಂದು ತಿಂಗಳನ್ನು ಕಳೆದ ಸುಖವಾಗಿ. ಅವನ ಕಣ್ಣು ತೆರೆದಿತ್ತು. ಮನಸ್ಸು ಒಲಿದಿತ್ತು. ಸೀತೆಯೂ ಅಂತಹದೆ ಬೆಳಕನ್ನು ಕಂಡು ತನ್ನನ್ನೇ ತಾನು ಮರೆತಳು. ಹೊಸ ಬಾಳನ್ನಾರಂಭಿಸಿದಳು. ಲೀಲೆ-ಸೀತಾ ಇತ್ತೀಚೆಗೆ ಗಂಗಾ-ಗೌರಿಯರಂತೆ ತುಂಬ ಹೊಂದಿಕೊಂಡಿದ್ದರು. ಅಕ್ಕ ತಂಗಿಯರಿಗಿಂತಲೂ ಹೆಚ್ಚಿನ ಮಮತೆ, ಸ್ನೇಹಗಳನ್ನು ಒಬ್ಬರೊಬ್ಬರು ನೀಡುತ್ತಿದ್ದರು.

ಅಂದು ಮಧ್ಯಾಹ್ನ ರಾಘು ಲೀಲಳಜತೆಗೆ ಹೊರಡುವದೆಂದು ನಿಷ್ಕರ್ಷೆಯಾಗಿತ್ತು. ಅದಕ್ಕಾಗಿ ಎಲ್ಲರ ಮನಸ್ಸೂ 'ಹುರು-ಹುರು' ಅನ್ನುತ್ತಿತ್ತು. ಊಟಕ್ಕೆ ಕುಳಿತಾಗ ಬಡಿಸುತ್ತಿರುವ ರಿಂದಕ್ಕ ಕೇಳಿದರು.

'ರಾಗಣ್ಣಾ ಅಡಿಗೆ ಹ್ಯಾಂಗ ಆಗೇದಪ್ಪಾ?'

'ಛಲೋ ಆಗೇದ ಕಕ್ಕಾ. ನಿಮ್ಮ ಕೈ ಮುಟ್ಟಿದ ಮ್ಯಾಲೆ ಕೇಳಬೇಕಾ?'

'ಮನ್ನೀಕಿಂತ ಛಲೋ ಆಗೇದಾ ?'

'ಓಹೋ !'

ರಿಂದಕ್ಕ ಒಂದು ಸಲ ಗಟ್ಟಿಯಾಗಿ ನಕ್ಕರು.

'ಯಾಕರೀ ಕಕ್ಕೀ ಅಷ್ಟ ನಗತೀರೀ ?'

ಅನ್ನದ ತುತ್ತನ್ನು ಬಾಯಿಗಿಟ್ಟುಕೊಳ್ಳುತ್ತ ಕೇಳಿದ ರಾಘು.

'ನನ್ನ ಮಾತು ಖರೇ ಆತಿಲ್ಲೊ?'

'ಯಾವ ಮಾತ್ರಾ?'

'ಲೀಲಾಗ ಛಲೋ ಅಡಗಿ ಮಾಡಲಿಕ್ಕೆ ಬರತ್ತದ ಅನ್ನೋದು?'

ಎಲ್ಲರೂ ಗಟ್ಟಿಯಾಗಿ ನಕ್ಕರು. ರಾಘು, ಅವನೂ ನಗುತ್ತ ಹೇಳಿದ.

'ಹಂಗಾರ ಇವತ್ತ ನಮ್ಮ ಬಾಯೀ ಸರಕಾರವಾ ಕೈಯಾಗ ಸೌಟ ಹಿಡದ್ರನಬಾರ್ದಾ?'

'ನಿಮ್ಮ ಬಾಯೀ ಸರಕಾರ ಅಂದ್ರ ಏನೋ ಅಂತ ತಿಳಕೊಂಡಿದ್ಯಲ್ಲ! ಹೆಂಗಾತ ಮಜಾ ಅಣ್ಣಾ-

ಸೀತಾ ಬಿದ್ದು, ಬಿದ್ದು ನಗುತ್ತ ಹೇಳಿದಳು. ಹಿಡಿಸಲಾರದ ನಗೆಯಿಂದ ಅನ್ನದ ಅಗಳೆರಡು ಅಡ್ಡಲಾಗಿ, ಸೀತಾ ಸ್ವಲ್ಪ ಕೆಮ್ಮಬೇಕಾಯಿತು.

'ಹಿತ್ತಲಗಿಡ ಮದ್ದಲ್ಲ ಅನ್ನಾವ್ರು ಈ ಕಾಲದ ಹುಡುಗ್ರು. ನನಗ ಗೊತ್ತಿಲ್ಲೇನು?' ಅಭಿಮಾನದಿಂದ ಹೇಳಿದರು ರಿಂದಕ್ಕ. ರಾಘು ಸೋಲು ವವನೆ?–ಅವನೂ ಹೇಳಿದ.

'ಅಲ್ಲ ಕಕ್ಕೀ ಇದು ಜಿದ್ದಲ್ಲಃ ಅಲ್ಲ. ಯಾಕಂದ್ರ ಎಲ್ಲಾರೂ ನೀವ ಒಂದಾಗೀರಿ ಕಾಣಸ್ತದ. ಏ ರಾಮು, ಮಹಾರಾಯಃ ನೀ ಅರ ಹೇಳಬಾರ್ದೇನು ಹಿಂಗಂತಃ? ಅಂದ್ರ ಹೇಳ್ತಿದ್ದೆ ನಮ್ಮ ಬಾಯೀಸೇಬ್ರ ಮಜಾ. ಅದಕಂತಃ ಅವರು ತಮ್ಮ ವ್ರತಾ ಬಿಟ್ಟು. ನಮ್ಮಕೂಡ ಊಟಕ್ಕ ಕೂತಾರ ಕಾಣಸ್ತದಃ.'

ರಾಘು ಪತ್ನಿಯೆಡೆಗೆ ತಿರುಗಿದ. ನಾಚಿಕೆಯಿಂದ ಅವಳ ಮೊಗ ಅರಕ್ತವಾಗಿತ್ತು. ಸೀತಾ ಲೀಲಳ ಪರವಾಗಿ ಹೇಳಿದಳು.

'ವ್ರತಾ ಯಾತರದಣ್ಣಃ–ನಿಮ್ಮ ಕೈಹಿಡದಮ್ಯಾಲೆ ಹೆಂಗ್ಸರ ವ್ರತಾನೂ ಉಳ್ಯೂದುಲ್ಲಃ ತೀರ್ಥನೂ ಉಳಿಯೂದುಲ್ಲ.'

'ನೀವು ಹೆಂಗಸರು– ಕೇಳತೀರ್‍ಯಾ?– ನಿಮ್ದಃ ನಡಸಾವ್ರು.'

ರಾಮು ರಾಘುವಿನ ಪರವಾಗಿ ಹೇಳಿದ ಸೀತೆಗೆ.

'ಅಂತೂ ನಮ್ಮ ಗಂಡಃ–ಹೇಣ್ತಿ ವಕೀಲಿ ನೀವಃ ಹೊತ್ತಿರನಬಾರ್ದಃ?'

'ಗೆಳೆತನಃ ಅಂದ್ರ ಅಂಥಾದು ರಾಘಣ್ಣಃ.'

ಹಿರಿಯರಾದ ರಿಂದಕ್ಕ ಹಿರಿಯ ತತ್ವವನ್ನೇ ಹೇಳಿ ಆ ಸ್ವಾರಸ್ಯ ಪ್ರಸಂಗಕ್ಕೆ ಮುಕ್ತಾಯ ಎಳೆದರು. ಎಲ್ಲರ ಊಟವೂ ಮುಗಿಯಿತು. ರಿಂದಕ್ಕನವರೂ ಅಷ್ಟರಲ್ಲಿಯೇ ಊಟಮಾಡಿ ಅಣಿಯಾದರು.

'ಬಂಡೀ ಹೂಡ್ಸಿ ನಿಲ್ಲಿಸೀನ್ರಿ, ಗಡಾ ಬರ್‍ರಿ.'

ಎಂದು ರಂಗ ಬಂದು ಹೇಳಿದೊಡನೆಯೆ ಸೀತಾ ಒಂದು ಮಣೆ ಹಾಕಿದಳು. 'ಇದರ ಮ್ಯಾಲೆ ಕೂಡ್ರು ಬಾ ಲೀಲಾಃ.'

ಲೀಲ ಬಂದು ಕುಳಿತುಕೊಂಡಳು. ಸೀತಾ ಒಂದು ಬೆಳ್ಳಿಯ ತಾಟ-ನಲ್ಲಿ ರೇಷ್ಮೆಯ ಬನಾರಸಿ ಪತ್ತಲ, ಒಂದು ಖಣ ಅರಿಷಣ, ಕುಂಕುಮದ ಕರಡಿಗೆಗಳನ್ನು ಇಟ್ಟುಕೊಂಡು ಬಂದಳು. ಅಷ್ಟರಲ್ಲಿಯೆ ರಿಂದಕ್ಕ ಆಹ-ಮಾಡಗಳನ್ನೆಲ್ಲ ಹುಡುಕಾಡಿ ಒಂದು ಅಡಿಕೆಯ ಬೆಟ್ಟ ತೆಗೆದುಕೊಂಡು ಬಂದರು.

ಲೀಲಳ ಹಣೆಗೆ ಕುಂಕುಮವಿಟ್ಟು, ತುಂಬಿದ ಗಲ್ಲಗಳಿಗೆ ಅರಿಷಿಣ ವಿಟ್ಟಾಗ ಲೀಲಳ ಸೌಂದರ್ಯ ಇನ್ನಷ್ಟು ಹೆಚ್ಚಾಯಿತು. ಹಾಗೆಯೆ ಸೀತಾ ಅವಳ ಕೈಯಲ್ಲಿ ಆ ಪತ್ತಲದ ಮೇಲೆ ಖಣವಿಟ್ಟು, ಅದರ ಮೇಲೆ ಅಡಿಕೆಯ ಬೆಟ್ಟವನ್ನಿಟ್ಟು ಉಡಿ ತುಂಬಿದಳು.

'ಅಯ್ಯ ನಮ್ಮವ್ವಾ ಇದೆಲ್ಲ ಯಾಕವ್ವಾ,'

'ಅರಿಷಣಾ– ಕುಂಕುಮ, ತೊಗೋಬೇಕು ಲೀಲಾ.'

ಲೀಲ ಒಂದೆರಡು ನಿಮಿಷಗಳಲ್ಲಿಯೇ ಹೊರಗೆಹೋಗಿ ತಿರುಗಿ ಬಂದಳು. ಸೀತಳನ್ನು ಅದೇ ಮಣೆಯ ಮೇಲೆ ಕುಳ್ಳಿರಿಸಿ ಕುಂಕುಮ, ಅರಿಷಿಣಗಳನ್ನು ಹಚ್ಚಿ ಇಲಕಲ್ಲ ಸೀರೆ, ಖಣಗಳನ್ನು ಉಡಿ ತುಂಬಿದಳು.

ಅರಿಷಿಣ, ಕುಂಕುಮ ಹಚ್ಚಿಕೊಳ್ಳಲು, ಉಡಿ ತುಂಬಿಸಿಕೊಳ್ಳಲು ಈಗ ಸೀತಳಿಗೆ ತುಂಬಿದ ಉತ್ಸಾಹವಿತ್ತೇವಿನಹ ಉದ್ವೇಗವಿರಲಿಲ್ಲ. ಸಾಂಪ್ರದಾಯದ ನೆಳಲೂ ಅಲ್ಲಿ ಅವಳಿಗೆ ಕಾಣಲಿಲ್ಲ.

ಅಲ್ಲಿಯೇ ನಿಂತ ರಿಂದಕ್ಕ ಹೇಳಿದಳು ಅಂತಃಕರುಣದಿಂದ.

'ಲೀಲಾ, ಸೀತಾ ಆ ಸೀರಿ ದೇವರ ಮುಂದ ಇಟ್ಟು ಘಳಗೀ ಮುರದು ಉಟಗೋಳ್ರಿ ನಂ ತಾಯಿ.'

ಹಿರಿಯರ ಆಜ್ಞೆಯನ್ನು ತಲೆಯಲಾಂತು ದೇವರೆದುರು ಒಂದು ನೀಲಾಂಜನದಲ್ಲಿ ದೀಪ ಹೊತ್ತಿಸಿಟ್ಟು ಕೈಮುಗಿದರು. ಹಾಗೆಯೆ ಗಳಿಗೆ ಮುರಿದು ತಮತಮಗೆ ಓದಿಸಿದ ಸೀರೆಗಳನ್ನೆ ಉಟ್ಟುಕೊಂಡರು. ತಿರುಗಿ ರಿಂದಕ್ಕನವರೆಡೆಗೆ ಬಂದು ಅವರಿಗೆ ವಂದಿಸಿದರು. ರಿಂದಕ್ಕ ಹೃದಯ ತುಂಬಿ ಹರಿಸಿದರು.

'ಮುತ್ತೈದೆ ಸಾವಿತ್ರಿಯರಾಗ್ರಿ. ಏಳು ಮಕ್ಳ ತಾಯಿ ಆಗ್ರಿ.'

ಅಷ್ಟರಲ್ಲಿಯೆ ರಾಘು–ರಾಮು ಅಲ್ಲಿಗೆ ಬಂದರು. ಅದಲು ಬದಲಾದ ಮನಸ್ಸಿನ ಹಾಗೆಯೆ ಅದಲು–ಬದಲಾದ ಆ ಸೀರೆಗಳನ್ನುಟ್ಟುಕೊಂಡು ನಿಂತ ಲೀಲೆ–ಸೀತೆಯರನ್ನು ಕಂಡು ಅವರಿಗೆ ನಗು ಬಂತು. ರಾಘುವಂತೂ ಕೆಣಕುವ ಸ್ವರದಲ್ಲಿ ಹೇಳಿದ.

'ಈ ಸೀರಿ ಬದಲಾದ್ಹಂಗs ಈ ಮನಸೂ ಬದಲಾಗೇದ ನೋಡು ರಾಮ್ಯಾ. ಅಂತೂ ಸೀತಕ್ಕ, ನಮ್ಮ ಹುಡಗಿನ್ನ ಫ್ಯಾಶನೇಬಲ್ ಹುಡಗಿನ್ನ ಮಾಡಿದ್ಲು.'

' ಅಯ್ಯೋ ಮಹರಾಯ್ತಿ, ನಮ್ಮ ಹುಡಗಿನ್ನಃ ಹಳ್ಳಿ ಕಗ್ಗನ್ನ ಮಾಡ್ಯಾಳ ನಿನ್ನ ಹೇಣ್ತಿ ನೋಡಿದಿಲ್ಲೊ ಆ ವೇಷಃ.'

ಲೀಲೆ–ಸೀತೆಯರ ಮೊಗಗಳು ಕೆಂಪುದಾಸಾಳದ ಹೂವಿನಂತಾಗಿದ್ದವು.

' ಇರಲಿ ಬಿಡ್ರ್ಯೋ, ಪಾಪ ಅವರ ಸುತ್ತ್ಯಾಕ ನಿಮ್ಮ ಕಾಟಃ. '

ರಿಂದಕ್ಕ ಹಿರಿತನದ ವಾಣಿಯಲ್ಲಿ ಹೇಳಿದರು.

ಮತ್ತೆ ಹೊತ್ತಾಯಿತೆಂದು ಕರೆಯಲು ಬಂದ ನಿಂಗ.

' ಹೋಗಿ ಬರತೀವಿ ಕಕ್ಕೀಃಃ '

ರಾಘು ರಿಂದಕ್ಕನವರಿಗೆ ನಮಸ್ಕರಿಸಿದ. ಅವರು ಬಾಯಿತುಂಬ ಆಶೀರ್ವದಿಸಿದರು.

' ಉದ್ದಂಡಾಯುಷ್ಯವಂತನಾಗು.'

ಹಿರಿಯರ ಆಶೀರ್ವಾದವನ್ನು ಪರಮ ಪ್ರಸಾದವೆಂದು ರಾಘು ಸ್ವೀಕರಿಸಿದ ಯಾವ ಸಾಂಪ್ರದಾಯಿಕತೆಯೂ ಈಗ ಅವನಿಗೆ ತೋರಲಿಲ್ಲ.

ಲೀಲ ಇನ್ನೊಂದು ಸಲ ನಮಸ್ಕರಿಸಿದಳು. ಅವಳ ಕಣ್ಣಲ್ಲಿ ನೀರೂರಿತ್ತು.

' ಅವ್ವಃ ನನ್ನ ಮರೀಬ್ಯಾಡ್ರಿ.... '

' ನಿನ್ನಂಥಾ– ಮುತ್ತಿನಂಥಾ ಮಗಳ್ನ ಹೆಂಗ ಮರಿಯೂದ ಲೀಲಾಃ. '

ಅವಳ ಬೆನ್ನ ಮೇಲೆ ಕೈಯಾಡಿಸುತ್ತ ಹೇಳಿದರು ರಿಂದಕ್ಕ. ಅವರ ಗುಳಿಬಿದ್ದ ಕಾಂತಿಹೀನವಾದ ಕಂಗಳಿಂದ ನಾಲ್ಕು ತೊಟಕುಗಳು ಕಳಚಿದವು. ಸೀತಳಿಗೂ ಕತ್ತು ತಂಬಿ ಬಂತು ದುಃಖ. ಆವಳು ಮೆಲ್ಲನೆ ಲೀಲಳ ಎರಡೂ ಹಸ್ತಗಳನ್ನು ತನ್ನ ಕೈಯಲ್ಲಿ ಹಿಡಿದುಕೊಂಡಳು. ಅವಳ ಮುಖದಿಂದ ಮಾತೇ ಹೊರಹೊಮ್ಮಲಿಲ್ಲ.

' ಈ ಗೆಳತಿನ್ನ ಮರೀಬ್ಯಾಡ ಸೀತಾಃಃ.... '

ಲೀಲಳ ಕೊರಳಿನಿಂದ ಭಾರವಾದ ನುಡಿ ತೇಲಿತು.

' ನನ್ನೂ ಮರೀಬ್ಯಾಡ ಲೀಲಃಃ.... '

ರಾಮು ಎಲ್ಲರನ್ನೂ ಅನಿವಾರ್ಯವಾಗಿ ಎಚ್ಚರಿಸಬೇಕಾಯಿತು. ಎಲ್ಲರೂ ಪಡಸಾಲೆ ದಾಟ ಹೊರಗೆ ಬಂದರು. ಎಲ್ಲರ ಕಣ್ಣಲ್ಲೂ, ಮನದಲ್ಲೂ ಅಗಲಿಕೆಯ ನೋವು ಕಾಣಿಸಿಕೊಂಡಿತ್ತು.

' ಹೋಗಿ ಬರತೀವಿ ಕಕ್ಕೀಃ. '

ಲೀಲ–ರಾಘು ಹೇಳಿದರು. ಅಂಗಳದಲ್ಲಿ ನಿಂತ ರಿಂದಕ್ಕ–

' ಹೋಗಿ ಬರ್ರಿಃ '

ಎಂದು ಭಾರವಾದ ಹೃದಯದಿಂದ ಹೇಳಿ ಅಲ್ಲಿಯೇ ನಿಂತರು. ಸವಾರಿ ಹಾಕಿದ ಎತ್ತಿನ ಬಂಡಿ ಆಗಳೆ ಸಿದ್ಧವಾಗಿತ್ತು. ಅದರಲ್ಲಿ ರಾಘು–ಲೀಲೆಯರ ಎಲ್ಲ ಸಾಮಾನುಗಳೂ ಇಟ್ಟಿದ್ದವು.

'ಹತ್ರಿ, ಹತ್ರಿ ಯಪ್ಪಾ ಗಾಡಿ ಬಿಡತೇನಿ.'

ಎಂದು ರಂಗ ಎತ್ತಿನ ಹಗ್ಗಗಳನ್ನು ಹಿಡಿದುಕೊಂಡೇ ಹೇಳಿದ; ರಾಘು–ಲೀಲೆಯರು ಹತ್ತಿಕುಳಿತುಕೊಂಡರು. ರಂಗ ಎತ್ತುಹೊಡೆದುಕೊಂಡು ನಿಧಾನವಾಗಿ ಊರು ದಾಟುವ ವರೆಗೂ ನಡೆದ. ಚಕ್ಕಡಿಯ ಹಿಂದಿನಿಂದ ರಾಮು–ಸೀತಾ ನಡೆದಿದ್ದರು. ಅಲ್ಲಿಗೇ ನಿಂತು ಹೇಳಿದರು.

'ಹೋಗಿ ಬರ್ರಿ.'

'ಹೋಗಿ ಬರತೀವಿ.'

ರಾಘು–ಲೀಲೆ ಹಿಂದೆ ಸರಿದರು. ಭಾರವಾದ ಹೃದಯದಿಂದ ಅವರಿಂದ ಮುಂದೆ ಮಾತುಗಳೇ ಹೊರಹೊಮ್ಮಲಿಲ್ಲ. ರಾಘು ತನ್ನ ಗೆಳೆಯನ ಕೈಯನ್ನು ಹಿಡಿದಂತೆಯೆ ಸೀತೆ ಲೀಲಳ ಕೈಯನ್ನು ತನ್ನ ಹಸ್ತಗಳಲ್ಲಿ ಅದುಮಿ ಹಿಡಿದಳು.

ಎಲ್ಲಲ್ಲೂ ನೀರವ ನಿಶ್ಶಬ್ದ ಒಂದೈದು ನಿಮಿಷ. ಅಷ್ಟರಲ್ಲಿಯೆ ಬೀಸಿದ ಗಾಳಿಗೆ ತೇಲಿಕೊಂಡು ಬಂದು ಹಳ್ಳಿಯ ಚಪ್ಪರದ ಚಹದಂಗಡಿಯಲ್ಲಿ ಹಚ್ಚಿದ ಮುದ್ರಿತ ಸಂಗೀತ ಅವರಿಗೆ ಕೇಳಿಸಿತು.

'ರಸವೆ ಜನನ
'ವಿರಸ ಮರಣ
'ಸಮರಸವೇ ಜೀವನ.'

ರಂಗ 'ಉದ್ದಿಗೆ' ಯ ಮೇಲೆ ಬಂದು ಕುಳಿತುಕೊಂಡು ಎತ್ತುಗಳ ಬೆನ್ನು ಚಪ್ಪರಿಸಿದ. ಎತ್ತುಗಳು ಓಟ ಕಿತ್ತವು. ಧೂಳು ಹಿಂದೆ ಹಾರುತ್ತಿತ್ತು.

ಅವರು ಕಣ್ಮರೆಯಾಗುವವರೆಗೂ ನೋಡುತ್ತ ನಿಂತು ರಾಮು–ಸೀತೆ ಮನೆಗೆ ಮರಳಿದರು. ಆ ಹಳ್ಳಿಯ ಚಹದಂಗಡಿಯ ಗ್ರಾಮಫೋನೋದ ಹಾಡು ಅವರಿಗೆ ಕೇಳಿಸುತ್ತಲೇ ಇತ್ತು.

'ರಸವೆ ಜನನ
'ವಿರಸ ಮರಣ
'ಸಮರಸವೇ ಜೀವನ.'

———೦———

# ನಮ್ಮ ಆಶ್ರಯದಾತರು

---

೧. ಶ್ರೀ ಡಿ. ಜಿ. ಚಿಕ್ಕೋಡಿ ಬಿ. ಇ. (ಸಿವ್ಹಿಲ್)
ಡೆಪ್ಯೂಟ ಎಂಜಿನಿಯರರು ಬಾದಾಮಿ ೧೦ ೦ ೦

೨. ,, ಎಸ್. ಸಿ. ನೀರಲಿ ಬಿ. ಎಸ್. ಸಿ. ಮಾಮಲೇದಾರರು
ಬೆಳಗಾಂವ ೧೦ ೦ ೦

೩. ,, ಬಿ. ಎನ್. ಹಾಲಿಹಾಳ ಬಿ. ಎ.
ರೆಸಿಡೆಂಟ ಮ್ಯಾಜಿಸ್ಟ್ರೇಟರು ಬೈಲಹೊಂಗಲ ೧೦ ೦ ೦

೪. ,, ಪಿ. ಎ. ದೇಶಪಾಂಡೆ ಎಲ್. ಎಲ್. ಬಿ.
ವಕೀಲರು ಮುದ್ದೇಬಿಹಾಳ ೧೦ ೦ ೦

೫. ,, ಎಚ್. ವಾಯ್. ಅಗಳಿ ಹಾಲಿಹಾಳ ೧೦ ೦ ೦

೬. ,, ಡಿ. ಜಿ. ಕಾರಕೂನ ನಂದಿಕೇಶ್ವರ ೧೦ ೦ ೦

೭. ,, ಜಿ. ಆರ್. ಕುಲಕರ್ಣಿ ಸರಕಲ್ ಇನ್ಸಪೆಕ್ಟರರು
ಅಮೀನಗಡ ೧೦ ೦ ೦

೮. ,, ಜಿ. ಆರ್. ಜೋಶಿ ಖ್ಯಾಡ ೧೦ ೦ ೦



## — ನಮ್ಮ ಸಹಾಯಕರು —

| | | | |
|---|---|---|---|
| ೧. ಶ್ರೀ. ಲಕ್ಷ್ಮಣರಾವ ದೇಶಪಾಂಡೆ ಇಂಡಿ | ೫ | ೦ | ೦ |
| ೨. ಡಾ. ಎನ್. ಜಿ. ಕುಲಕರ್ಣಿ ವೆಟರನರಿ ಡಾಕ್ಟರರು ಗೋಕಾಕ | ೫ | ೦ | ೦ |
| ೩. ಶ್ರೀ ವಾಯ್. ಕೆ. ಮಳಗಿ ವಕೀಲರು ಬಾದಾಮಿ | ೫ | ೦ | ೦ |
| ೪. ,, ಎಸ್. ಎಸ್. ದೇಶಪಾಂಡೆ ವಕೀಲರು ಬಾದಾಮಿ | ೫ | ೦ | ೦ |
| ೫. ,, ಆರ್. ಬಿ. ಭುಜಂಗ ಎಕ್ಸಾಯಿಜ ಇನ್ಸಪೆಕ್ಟರರು ಬಾಗಲಕೋಟೆ | ೫ | ೦ | ೦ |
| ೬. ,, ಎಸ್. ಎಸ್. ಬಸೂಪಟ್ಟದ ಎಂ. ಎ. ಉಪಾಧ್ಯಾಯರು ಗುಳೇದಗುಡ್ಡ | ೫ | ೦ | ೦ |
| ೭. ,, ಈರಪ್ಪ ಮೆಣಸಿಗಿ ವ್ಯಾಪಾರಿಗಳು ಗುಳೇದಗುಡ್ಡ | ೫ | ೦ | ೦ |
| ೮. ,, ಎ. ಟಿ. ಕುಲಕರ್ಣಿ ಉಪಾಧ್ಯಾಯರು ಗದಗ | ೫ | ೦ | ೦ |
| ೯. ,, ಬಿ. ಜಿ. ಉಳ್ಳಾಗಡ್ಡಿ ಕಲಾದಗಿ | ೫ | ೦ | ೦ |
| ೧೦. ,, ಎಚ್. ವ್ಹಿ. ಉಪಾಧ್ಯೆ ವ್ಯಾಪಾರಿಗಳು ಬಾದಾಮಿ | ೫ | ೦ | ೦ |
| ೧೧. ,, ಎಲ್. ಎನ್. ಕರಾರೆ ಬಾದಾಮಿ | ೫ | ೦ | ೦ |
| ೧೨. ,, ಬಿ. ಎಸ್. ನಾಯಿಕ ಬಿ. ಎ. ಬಾದಾಮಿ | ೫ | ೦ | ೦ |
| ೧೩. ,, ಆರ್. ಬಿ. ಬಜಂತ್ರಿ ಬಾದಾಮಿ | ೫ | ೦ | ೦ |
| ೧೪. ,, ಪ. ಸು. ಭಟ್ಟ ಶಿರಸಿ | ೫ | ೦ | ೦ |
| ೧೫. ,, ಎನ್. ಬಿ. ಹೊರಟ್ಟಿ ಕುಳಗೇರಿ ಕತ್ರಾರಿ | ೫ | ೦ | ೦ |